# ಜೈಲುಗಳಲ್ಲಿ ಬೆಳೆದ ಬಂಡಾಯ ಕವಿ ಚೆರಬಂಡರಾಜು

ತೆಲುಗಿನ ಕ್ರಾಂತಿಕಾರಿ ಸಾಹಿತ್ಯದ ಬೆನ್ನೆಲುಬಾಗಿದ್ದ ಚೆರಬಂಡರಾಜು ಜುಲೈ ಎರಡರಂದು ಅಸುನೀಗಿದರು. ೪೮ ವರ್ಷಗಳ ಹಿಂದೆ ಹೈದರಾಬಾದಿನ ಬಳಿ ಒಂದು ಗ್ರಾಮದಲ್ಲಿ ಭಾಸ್ಕರ ರೆಡ್ಡಿಯಾಗಿ ಹುಟ್ಟಿದ ಚೆರಬಂಡರಾಜು, ಸುಮಾರು ೧೮ ವರ್ಷಗಳಿಂದ ಕ್ರಾಂತಿಯ ಕಹಳೆಯನ್ನು ಮೊಳಗಿಸುವುದರಲ್ಲೇ ನಿರತರಾಗಿದ್ದರು. ಚೆರಬಂಡರಾಜು ಎಂಬ ಹೆಸರು ಇತ್ತೀಚಿನ ತೆಲುಗು ಕಾವ್ಯದಲ್ಲಿ ಮರೆಯಲಾಗದ ಒಂದು ಹೆಸರಾಯಿತು. ೧೯೬೫ರಲ್ಲಿ ದಿಗಂಬರ ಕಾವ್ಯಪಂಥ ತೆಲುಗಿನಲ್ಲಿ ಪ್ರಾರಂಭವಾದಾಗ, ತರುಣ ಪೀಳಿಗೆಗೆ ಚೆರಬಂಡರಾಜು ಅವರ ಕಾವ್ಯಧಾರೆಯ ಸತ್ವದ ಅರಿವಾಯಿತು. 'ಕಟಕಟೆ ಹತ್ತಲು ಬಿಡಿ ನನ್ನನ್ನು' ಎಂದು ಪ್ರಭಾವಶಾಲಿ ಕವನವೊಂದನ್ನು ಬರೆದ ಚೆರಬಂಡರಾಜು, ಕಳೆದ ದಶಕದಲ್ಲಿ ಹಲವು ಬಾರಿ ಸೆರೆಮನೆಯಲ್ಲೇ ಕಾಲ ಕಳೆದರು ಅವರ ಕಾವ್ಯ (ಚೆರ= ಸೆರೆ) ಸಾರ್ಥಕವಾಯಿತು.



ಈ ಜುಲೈನಲ್ಲಿ ಕ್ಯಾನ್ಸರಿಗೆ ಬಲಿಯಾದ ಕ್ರಾಂತಿಕಾರಿ ಕವಿ ಚೆರಬಂಡರಾಜು

೧೯೬೫ ರಿಂದ ೧೯೭೦ ರ ವರೆಗೆ ದಿಗಂಬರ ಕಾವ್ಯಪಂಥದ ಕವಿಯಾಗಿ ಜನಪ್ರಿಯರಾಗಿದ್ದ ಚೆರಬಂಡರಾಜು 'ವಂದೇ ಮಾತರಂ' 'ಜಗದ್ಗುರುಗಳು ಬರುತ್ತಿದ್ದಾರೆ ಎಚ್ಚರಿಕೆ' ಮುಂತಾದ ಉತ್ತಮ ಕವನಗಳನ್ನು ಬರೆದಿದ್ದರು. ದಿಗಂಬರ ಕವಿಗಳ ಕಾವ್ಯಧಾರೆಯ ಬಗ್ಗೆ ಅನುಮಾನಗಳನ್ನು ವ್ಯಕ್ತಪಡಿಸಿದ ವಿಮರ್ಶಕರು ಕೂಡ, ಚೆರಬಂಡರಾಜು ಅವರ ಶಕ್ತ ಅಭಿವ್ಯಕ್ತಿಯ ಬಗ್ಗೆ ಮೆಚ್ಚುಗೆ ತೋರಿಸಿದರು.

೧೯೭೦ರಲ್ಲಿ ಕ್ರಾಂತಿಕಾರಿ ಲೇಖಕರ ಸಂಘ ಏರ್ಪಟ್ಟಾಗ ಚೆರಬಂಡರಾಜು ಅದರ ಮೂಲಾಧಾರ ಚಕ್ರವಾದರು. ಅವರ ದಿಗಂಬರ ಸ್ನೇಹಿತರು ಕೆಲವರು ಕ್ರಾಂತಿಯ ಮಾರ್ಗವನ್ನು ಬಿಟ್ಟರೂ, ನೆಪಗಳನ್ನು ಹೇಳಿ ಜಾರಿಕೊಂಡರೂ ಚೆರಬಂಡರಾಜು ಮಾತ್ರ ತಮ್ಮ ದೃಢವಾದ ನಿಲುವನ್ನು ಬಿಡಲಿಲ್ಲ. ಒಂದು ಪೌಢಶಾಲೆಯ

ಕೊನೆಯಪುಟಕ್ಕೆ

## ಪಂಚಮ ಓದುಗರ ಗಮನಕ್ಕೆ

ಪಂಚಮದ ವಿಳಾಸ ಈಗ ಬದಲಾಗಿದೆ. ವರದಿ, ಲೇಖನ ಕಥೆ ಕವನ ಅನುಭವ ಕಳುಹಿಸುವವರು, ಚಂದಾ ಕಳುಹಿಸುವವರು ಕೆಳಕಂಡ ವಿಳಾಸಕ್ಕೆ ಮಾತ್ರ ವ್ಯವಹರಿಸಿ :

ವ್ಯವಸ್ಥಾಪಕರು
'ಪಂಚಮ ಪತ್ರಿಕೆ'
2514-ಎ, ಕೆ. ಜಿ. ಕೊಪ್ಪಲು
ಮೈಸೂರು-570014

ದೂರವಾಣಿ : 26142

ಚಂದಾ ಮುಗಿದಿರುವವರು ದಯವಿಟ್ಟು ಕೂಡಲೆ ಚಂದಾ ಕಳುಹಿಸಿ ಸಹಕರಿಸಿ.

ವಿತರಣೆಗಾಗಿ ಪ್ರತಿ ತಿಂಗಳು ಹೆಚ್ಚು ಪಂಚಮ ತರಿಸಿಕೊಳ್ಳುತ್ತಿರುವವರು ಆಯಾ ತಿಂಗಳ ಮೊದಲ ವಾರ ತಪ್ಪದೆ ಹಣ ಕಳುಹಿಸಿಕೊಡಿ ಎಂದು ವಿನಂತಿಸುತ್ತೇವೆ. ಪಂಚಮದ ಕಷ್ಟ ನಿಮಗೆ ಅರ್ಥವಾಗುತ್ತದೆ ಎಂದು ಭಾವಿಸುತ್ತೇವೆ.

—ವ್ಯವಸ್ಥಾಪಕರು
"ಪಂಚಮ"

ಪಂಚಮ

ಸಂಪುಟ : 6 ಸಂಚಿಕೆ : 14 15 ಬೆಲೆ : 50 ಪೈಸೆ ಆಗಸ್ಟ್ 82

## 35 ನೇ "ಸ್ವಾತಂತ್ರ್ಯ" ದಿನಾಚರಣೆ : ಎಚ್ಚೆತ್ತ ಪೋಲೀಸರೂ ದಲಿತರೂ

ಇಂಡಿಯಾ ಈಗ ೩೫ ಸ್ವಾತಂತ್ರ್ಯ ದಿನಾಚರಣೆಗಳನ್ನು ಕಂಡಂತಾಗಿದೆ. ಸ್ವಾತಂತ್ರ್ಯ ದಿನಾಚರಣೆಗಳು ಬೆಳೆಯುತ್ತಿದ್ದಂತೆ ಜೊತೆಯಲ್ಲೇ ಸಾಮಾನ್ಯ ಭಾರತೀಯನಿಗೆ "ನಾನು ಅಸ್ವತಂತ್ರ" ಎನ್ನುವ ವಾಸ್ತವ ಪ್ರಜ್ಞೆಯೂ ಬೆಳೆಯತೊಡಗಿದೆ. ಈ ಪ್ರಜ್ಞೆ ರಕ್ತ ಪಾತದೊಂದಿಗೆ ಸ್ಫೋಟಗೊಳ್ಳುವ ಮೊದಲೇ ಆಳುವವರು ಎಚ್ಚೆತ್ತುಕೊಳ್ಳುವ ಸೂಚನೆ ಕಾಣುತ್ತಿಲ್ಲ.

ಬದಲಿಗೆ, ಆಳುವವರು ಸಾಮಾನ್ಯನ ಮುಖಕ್ಕೆ ಮಣ್ಣೆರಚುತ್ತಾ ಬರುತ್ತಿದ್ದಾರೆ. ಬೆ ಲೆ ಏ ರಿ ಕೆ, ನಿರುದ್ಯೋಗ, ಬಡತನಗಳ ನರಕದ ನಡುವೆ ಜನರು ಉಸಿರು ಕಟ್ಟಿರುವಾಗ ಯಾರೂ ಕಂಡರಿಯದ ತಮ್ಮ ಸಾಧನೆಗಳ ಬಗ್ಗೆ ಅವರು ಕೊಚ್ಚುತ್ತಿದ್ದಾರೆ. ತಮ್ಮ ಜೇಬುಗಳಲ್ಲಿ ಕೂತ ಸ್ವಾತಂತ್ರ್ಯವನ್ನು ತೋರಿಸಿ ವಾಪ್ಪುಟಕ್ಕೆ ಜನರು ತಲೆಬಾಗುವಂತೆ ಹೇಳುತ್ತಿದ್ದಾರೆ. ಆದರೆ ಜನರು ತಮ್ಮ ಸಂತೋಷದ ವರ್ಷಕ್ಕಾಗಿ ಕಾದು ಕಾದು ಬೇಸತ್ತು ಬಳಲಿದ್ದಾರೆ. ಈ ಬಳಲಿಕೆ ಬಿಡುಗಡೆಯ ಪ್ರತಿಭಟನೆಯಾಗಿ ಇಷ್ಟರಲ್ಲೇ ಸ್ಫೋಟಗೊಳ್ಳುವ ಸೂಚನೆ ಕಾಣುತ್ತಿದೆ. ಈ ಬಾರಿಯ ಸ್ವಾತಂತ್ರ್ಯ ದಿನಾಚಾರಣೆಯನ್ನು ಕಪ್ಪು ದಿನವಾಗಿ ಆಚರಿಸಿರುವ ಮಹಾರಾಷ್ಟ್ರದ ಬಂಡಾಯಗಾರ ಪೋಲೀಸರು ಮತ್ತು ಕರ್ನಾಟಕದ ಎಚ್ಚೆತ್ತ ದಲಿತರು ಈ ಸೂಚನೆಗೆ ಜೀವ ತುಂಬಿದ್ದಾರೆ.

ಈ ನಡುವೆ ದುಃಖದ ಸಂಗತಿ ಎಂದರೆ ಸ್ವಾತಂತ್ರ್ಯ ದಿನಾಚರಣೆಯಂದೇ ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಹಾಸನ ಜಿಲ್ಲಾ ಸಂಚಾಲಕರಾದ ತ್ಯಾಗಿ ಮತ್ತು ಗೆಳೆಯರ ಮೇಲೆ ಸ್ಥಳೀಯ ಪೋಲೀಸರು ನಡೆಸಿರುವ ಹಲ್ಲೆ ! ನ್ಯಾಯ ಕೇಳುವ ದಲಿತರ ಬಗ್ಗೆ, ನೊಂದವರ ಬಗ್ಗೆ ಪೋಲೀಸರು ಮನುಷ್ಯರಂತೆ ವರ್ತಿಸುವಂತಾದರೆ ಮಾತ್ರ ಪೋಲೀಸರ ಮತ್ತು ಎಲ್ಲರ ಬಿಡುಗಡೆ ಸಾಧ್ಯ ಎನ್ನುವುದನ್ನು ಅವರು ಕೂಡಲೆ ಅರಿತುಕೊಳ್ಳಬೇಕಾಗಿದೆ.

—ಗೋ

# ದುಡ್ಡಿಗೆ ಹುಟ್ಟಿದ ರೋಗಿಷ್ಠ ವ್ಯವಸ್ಥೆ

ರೋಗಿ : "ಬುದ್ಧಿ ಸಿಕ್ಕಾಬಟ್ಟೆ ಎದೆನೋವು ಬುದ್ಧಿ !"

ಡಾಕ್ಟರ್ : "ಯಾರಯ್ಯ ನೀನು ನಿನ್ನ ಹೆಸರಿನ ಚೀಟಿ ಬಂದಾಗ ಕೂಗ್ತಿನಿ ಹೋಗು"

ರೋಗಿ : (ದೈನ್ಯದಿಂದ) "ಜಲ್ದಿ ನೋಡಿ ಬುದ್ಧಿ ನಾ ಸತ್ತೋಯ್ತಿವ್ನಿ"

ಡಾಕ್ಟರ್ : (ಕೋಪದಿಂದ) "ಏಯ್ ಹೋಗಯ್ಯ ಕ್ಯೂನಲ್ಲಿ ಬಾ"

ರೋಗಿಯ ಹೆಂಡತಿ : (ಕಣ್ಣೀರಿಕ್ಕುತ್ತಾ) "ಸ್ವಾಮಿ ನಮ್ಮೆಜವಾನ್ರ ಉಳಿಸಿಕೊಡಿ ನಿಮ್ ಕಾಲೀಗ್ ಬೀಳ್ತೀನಿ !"

ಡಾಕ್ಟರ್ : "ಅದೆಲ್ಲಾ ಆಗೊಲ್ಲ ರೂಲ್ಸ್ ಅಂದ್ರೆ ರೂಲ್ಸ್ !"

ಇದು ನರಕ ಸದೃಶ್ಯವಾದ ಮೈಸೂರಿನ ಕೆ. ಆರ್. ಆಸ್ಪತ್ರೆಯ ಔಟ್ ಪೇಶೆಂಟ್‌ನ ಎಮರ್ಜೆನ್ಸಿ ವಾರ್ಡ್‌ನಲ್ಲಿ ಕಂಡು ಬಂದ ದೃಶ್ಯ. ರೋಗಿಗೆ ತುಂಬಾ ಎದೆನೋ (ವ್ಯಲೈಟ್ ಹಾರ್ಟ್ ಅಟ್ಯಾಕ್) ತಡೆಯಲಾರದೆ ಒದ್ದಾಡುತ್ತಿದ್ದಾನೆ. ಹೆಂಡತಿ ಕಣ್ಣೀರಿಡುತ್ತಾ ಗೋಗರೆಯುತ್ತಿದ್ದಾಳೆ. ಅವನ ಹೆಸರಿನ ಚೀಟಿ ಬರುವತನಕ ಅವನು ಸತ್ತರೂ ನೋಡುವುದಿಲ್ಲ, ಇದು ಆ ಡಾಕ್ಟರ್ ಹಠ !

**ಹೆಚ್. ಎಸ್. ರಾಜೇಂದ್ರ ಸಿಂಗ್**

ಯಾರಾದರೂ ಹೆಲ್ಮೆಟ್ ಹಿಡಿದು ಬರುವವರು ಗಾಂಧಿಟೋಪಿ ಹಾಕಿದವರು, ಸೂಟುಬೂಟು ಧರಿಸಿ ಬರುವ ಅಧಿಕಾರಿಗಳು, ಬಣ್ಣ ಬಣ್ಣದ ಬಟ್ಟೆಯುಟ್ಟು ಮೈತುಂಬಿಕೊಂಡು ಬರುವ ಹೆಣ್ಣು ಮಕ್ಕಳನ್ನೂ "ಏನೂ ? ಬನ್ನಿ" ಎಂದು ಹಲ್ಕಿರಿಯುತ್ತಾ ಸ್ವಾಗತಿಸುತ್ತಾರೆ. ಇವರೆಲ್ಲರ ಪಾಲಿಗೆ ಕ್ಯೂ ಬೇಕಾಗೆಯಿಲ್ಲ !

ಇದು ಒಂದು ದಿನದ ಗೋಳಲ್ಲ. ಹೊರಗಡೆ ಕ್ಯೂಲಿನಲ್ಲಿ ರೋಗಿಗಳು ನಿಂತು ಸಾಯುತ್ತಿದ್ದರೂ ಐದಾರು ಜನ ಡಾಕ್ಟರ್‌ಗಳು ಕುಳಿತು ಸಿಗರೇಟು ಸೇದುತ್ತಾ, ಎಲೆಯಡಿಕೆ ಮೆಲ್ಲುತ್ತಾ ಅವರವರ ಮನೆಮಠಗಳ ವಿಷಯ, ಅವರ ಮಕ್ಕಳ ವಿಷಯ ಅವರ ಹೆಂಡತಿ ಮಕ್ಕಳ ವಿಷಯ, ಮೆಡಿಕಲ್ ಕಾಲೇಜಿಗೆ ಸೀಟು ಕೊಡಿಸುವ ಬಗ್ಗೆ, ಅಬ್ದುಲ್ ಸಮದ್‌ರನ್ನು ಕಾಣುವ ಬಗ್ಗೆ ಮುಂತಾಗಿ ರೋಗಿಗಳನ್ನು ಮರೆತು ಹರಟೆ ಹೊಡೆಯುತ್ತಾರೆ.

ರೋಗಿಗಳನ್ನು ಒಳಕ್ಕೆ ಬಿಡುವುದಕ್ಕೆ ಬಿಳಿ ಬಟ್ಟೆ ಹಾಕಿದ ಜವಾನರಿರುತ್ತಾರೆ. ಸೂಟು ಬೂಟು ಧರಿಸಿ ಬರುವವರನ್ನು ಬಹಿರಂಗವಾಗಿ ಕೈಗೆ ತುರುಕುವವರನ್ನು ಪ್ರೊಫೆಸರ್ ಮತ್ತು ಅಸಿಸ್ಟೆಂಟ್ ಪ್ರೊಫೆಸರ್ ರೂಮಿಗೆ ಕಳುಹಿಸಲಾಗುತ್ತೆ. ಮಿಕ್ಕ ರೋಗಿಗಳನ್ನು ಕಲಿಯುತ್ತಿರುವ ಹುಡುಗರ ಹತ್ತಿರ ಕಳುಹಿಸುತ್ತಾರೆ. ಆಕಸ್ಮಾತ್ ಯಾರಾದರೂ ಪಂಚೆಯುಟ್ಟ, ಚಡ್ಡಿ ಹಾಕಿದ ಜನರು ಪ್ರೊಫೆಸರ್ ರೂಮಿಗೆ ಹೋದರೆ ಜವಾನನ್ನು ಕರೆದು ಹೀನಮಾನವಾಗಿ ಬೈಯುತ್ತಾ "ನಿಂಗೇನೂ ಸ್ವಲ್ಪಾನೂ ಗೊತ್ತಾಗೊಲ್ವೆನಯ್ಯಾ? ಎರಡನೇ ನಂಬರ್ ರೂಮಿಗೆ ಕಳುಹಿಸು" ಎನ್ನುತ್ತಾರೆ.

ರೋಗಿಗಳನ್ನು ಆಸ್ಪತ್ರೆಗೆ ಅಡ್ಮಿಟ್ ಮಾಡಿಕೊಳ್ಳಬೇಕಾದ ಸಂದರ್ಭದಲ್ಲಿ "ಏನ್ರಿ ಅಡ್ಮಿಟ್ ಆಗ್ತೀರಾ ?" ಇದಕ್ಕೆಲ್ಲಾ ಹೆಚ್ಚು ಹಣ ಬೇಕಾಗುತ್ತೆ ಹಣ ತಂದರೆ ಅಡ್ಮಿಟ್ ಇಲ್ಲದಿದ್ದರೆ ಇಲ್ಲ ಅಡ್ಮಿಟ್ ಆದರೂ ಬೆಡ್ ಸಿಗುವುದಕ್ಕಾಗಿ ಪ್ರತ್ಯೇಕವಾಗಿ ಹಣ ತೆತ್ತಬೇಕು. ಶಸ್ತ್ರ ಚಿಕಿತ್ಸೆಗೆ ಹಿಂದಿನ ದಿನವೇ ಡಾಕ್ಟರ್ ಮನೆಗೆ ಹಣ್ಣು ಹಂಪಲುಗಳ ಜೊತೆ ಸಾಕಷ್ಟು ಹಣವನ್ನು ನೀಡಿರಬೇಕು. ಇಲ್ಲದಿದ್ದರೆ ಚಿಕಿತ್ಸೆ ಇಲ್ಲ.

ಕೆ. ಆರ್. ಆಸ್ಪತ್ರೆಯ ಎಕ್ಸರೇ ಬಡವರ ಪಾಲಿಗೆ ಇಲ್ಲವೇ ಇಲ್ಲ. ಹಣವುಳ್ಳವರ ಪಾಲಿಗೆ ಮಾತ್ರ. ನೋಡ್ರಿ ನಿಮ್ಮ ಕಾಯಿಲೆ ವಾಸಿಯಾಗ ಬೇಕಾದರೇ ಫೋಟೋ ತೆಗಿಸಬೇಕು. ನೂರು ರೂಪಾಯಿ ಆಗುತ್ತೆ ಕೊಡ್ತೀರ" ! ಕೊಡೊಲ್ಲ "ಅಂದ್ರೆ ಮಿಷ್ನ ಕೆಟ್ಹೋಗಿದೆ ಹೊರಗಡೆ ತೆಗಿಸಿ" ಎನ್ನುತ್ತಾರೆ.

ಈ ಎಲ್ಲಾ ಅವ್ಯವಸ್ಥೆಯ ಬಗ್ಗೆ ಇಲ್ಲೊಬ್ಬ ತರುಣ ಡಾಕ್ಟರನ್ನು ಬೇಟಿ ಮಾಡಿದಾಗ ಆತ "ಏನು ಮಾಡೋದು ಸಾರ್ ಸರ್ಕಾರದಿಂದ ಸರಿಯಾಗಿ ಔಷದಿ ಸಪ್ಲೈಯಾಗೋದಿಲ್ಲ ಬಂದ ಔಷಧಿಗಳು ಇಲ್ಲಿನ ಮುಖ್ಯ ಡಾಕ್ಟರುಗಳ ಕೈವಶವಾಗುತ್ತವೆ. ನ್ಯಾಯವಾಗಿ ಬ್ಯಾಂಡೇಜ್ ಬಟ್ಟೆ ಸಿಗುವುದೂ ಬಹಳ ಕಷ್ಟ" ಎನ್ನುತ್ತಾರೆ.

ಊಟ ಬಟ್ಟೆಗೂ ನೇರವಿಲ್ಲದ ದಲಿತರು ಇಂಥ ಆಸ್ಪತ್ರೆಗಳ ಮೆಟ್ಟಲನ್ನೂ ಹತ್ತಲಾರದೆ ಅಲ್ಲಲ್ಲೆ ಸಾಯುತ್ತಿದ್ದಾರೆ. ಈ ರೊಗಿಷ್ಠ ಕ್ರೂರ ವ್ಯವಸ್ಥೆಗೆ ಔಷಧಿ ಕೊಡುವವರು ಯಾರು ?

## ಕರ್ನಾಟಕ ದಲಿತ ಶಿಕ್ಷಕರ ಸಂಘದ ಕರೆ

ಕರ್ನಾಟಕದಾದ್ಯಂತ ಪ್ರಾಥಮಿಕ ಶಾಲೆಗಳಿಂದ ಪ್ರೌಢಶಾಲಾವರೆಗಿನ ದಲಿತ ಶಿಕ್ಷಕರು ಅನುಭವಿಸುತ್ತಿರುವ ಕಿರುಕುಳ, ಯಾತನೆ, ಸರ್ಕಾರ ಇವರ ಬಗ್ಗೆ ತಾಳಿರುವ ತಾರ–ತಮ್ಯ ಧೋರಣೆಯ ವಿರುದ್ಧ ಹೋರಾಡಲು ಕರ್ನಾಟಕ ದಲಿತ ಶಿಕ್ಷಕರ ಸಂಘ ವನ್ನು ರಚಿಸಲಾಗಿದೆ. ಇದರ ಪೂರ್ವಭಾವಿ ಸಭೆಯನ್ನು ತಾ ೮–೮–೮೨ ರಂದು ಬೆಂಗಳೂರಿನಲ್ಲಿ ಕರೆಯಲಾಗಿತ್ತು.

ಈ ಸಭೆಯಲ್ಲಿ ಮುಖ್ಯ ಪೋಷಕರನ್ನಾಗಿ ಶ್ರೀಧರನ್‌ರವರನ್ನು ಮತ್ತು ಸಂಚಾಲಕರನ್ನಾಗಿ :

H. G. ಹುಚ್ಚಪ್ಪನವರ್ (ಧಾರವಾಡ)
B. ಅಶ್ವಥ್ (ಕೋಲಾರ)
ಹರಿಯಪ್ಪ (ಚಿಕ್ಕಮಗಳೂರು)
ಜಯರಾಮಯ್ಯ (ತುಮಕೂರು)
S. L. ಉಮಾಶಂಕರ್ (ರಾಯಚೂರು)

ಇವರುಗಳನ್ನು ಅ ವಿರೋಧವಾಗಿ ಆಯ್ಕೆ ಮಾಡಲಾಯಿತು.

ಈ ಸಮಿತಿಯು ನಾಡಿನಾದ್ಯಂತ ಸಂಚರಿಸಿ ದಲಿತ ಶಿಕ್ಷಕರ ಸಮಸ್ಯೆಗಳನ್ನು ಸಂಗ್ರಹಿಸಿ ಅವರನ್ನು ಸಂಘಟಿಸುತ್ತದೆ. ಈ ಸಂಘಟನೆಯ ಆಧಾರದ ಮೇಲೆ ಮುಂದಿನ ಹೋರಾಟದ ರೂಪಗಳನ್ನು ನಿರ್ಧರಿಸಲಾಗುತ್ತದೆ. ಆದ್ದರಿಂದ ರಾಜ್ಯಾದ್ಯಂತ ಇರುವ ಹರಿಜನ ಗಿರಿಜನ ಶಿಕ್ಷಕರು ತಮ್ಮ ಕುಂದು ಕೊರತೆಗಳನ್ನು ಈ ವಿಳಾಸಕ್ಕೆ ತಿಳಿಸಬೇಕಾಗಿ ವಿನಂತಿಸಲಾಗಿದೆ.

**ವಿಳಾಸ :**

**ಓ. ಶ್ರೀಧರನ್**
**3. ಎ. ಇಂದ್ರ ಮಹಲ್**
**5ನೇ ಮೇನ್, ಗಾಂಧಿನಗರ**
**ಬೆಂಗಳೂರು–9**

## ಕಗ್ಗೊಲೆಯ ಸರ್ಕಾರ

ದೇಶಾದಾದ್ಯಾಂತ ದಲಿತರ ಕಗ್ಗೊಲೆಗಳು ನಡೆಯುತ್ತಿದ್ದರೂ, ಯಾವುದೇ ತೀವ್ರ ಕ್ರಮಗಳನ್ನು ತೆಗೆದುಕೊಳ್ಳದ ಸರ್ಕಾರದ ನಿಲುವನ್ನು ಪ್ರತಿಭಟಿಸಿ ಹಾಗೂ ದಲಿತರ ಸಂಘಟನೆ ಮಾಡುವತ್ತ ಹೆಜ್ಜೆ ಹಾಕುತ್ತಿರುವ ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಮಂಡ್ಯ ಶಾಖೆಯು ತಾ ॥ ೭ ಮತ್ತು ೮ ರಂದು ಕಾಡು ಕೊತ್ತನ ಹಳ್ಳಿ ಮತ್ತು ಹಿಟ್ಟನಹಳ್ಳಿ ಗ್ರಾಮಗಳಲ್ಲಿ ಭಾರಿ ಬಹಿರಂಗ ಸಭೆಗಳನ್ನು ಏರ್ಪಡಿಸಲಾಗಿತ್ತು. ಸ್ಥಳೀಯ ಶಾಖೆಗಳನ್ನು ಉದ್ಘಾಟಿಸಿ ನಾರಾಯಣ್ ಗಂಗರಾಂ ಮಾತನಾಡಿದರು. ಸಮಾರಂಭದ ಅಧಕ್ಷ್ಯತೆಯನ್ನು ಹೆಚ್. ಎಸ್. ರಾಜೇಂದ್ರಸಿಂಗ್ ವಹಿಸಿದ್ದರು. ಪ್ರಾರಂಭಕ್ಕೆ ಮಂಜಯ್ಯ ಕ್ರಾಂತಿಗೀತೆ ಹಾಡಿದರು.

ಚಂದ್ರಹಾಸ ಸ್ವಾಗತಿಸಿದರು. ಸಭೆಯ ನಂತರ 'ಪತ್ರೆಸಂಗಪ್ಪನ ಕಗ್ಗೊಲೆ' ಎಂಬ ನಾಟಕವನ್ನು ಪ್ರದರ್ಶಿಸಲಾಯಿತು.

## ಒಂದು ಸಣ್ಣ ಕಥೆ

# ಆ ನಗುವೂ ಮತ್ತು ನಾಯಿಯೂ

ಒಂದು ದಿನ ಮಂತ್ರಿಯೊಬ್ಬರನ್ನು ಕಾಣಲೆಂದು ಬೆಂಗಳೂರಿನ ಕುಮಾರ ಪಾರ್ಕಿಗೆ ಹೋಗಿದ್ದೆ. ಅಂದು ಭಾನುವಾರ. ಮಂತ್ರಿಗಳು ಯಾವುದೋ ಸತ್ಕಾರಕೂಟಕ್ಕೆ ಹೋಗಿದ್ದಾರೆಂದು ತಿಳಿದು ವಾಪಸ್ಸು ಬರಬೇಕಾಯಿತು. ಪಕ್ಕದಲ್ಲಿದ್ದ ಪಾರ್ಕಿನಲ್ಲಿ ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಳ್ಳಲು ಮನಸ್ಸಾಯಿತು. ಹೋಗಿ ಮರದ ಕೆಳಗಿನ ಕಲ್ಲು ಚಪ್ಪಡಿಯಮೇಲೆ ಕೂತು ವಾಚನ್ನು ನೋಡಿಕೊಂಡೆ. ಗಂಟೆಊಟದ ಸಮಯ ಹೊಟ್ಟೇ ಬೇರೆ ಹಸಿಯುತ್ತಿತ್ತು. ಕಂಕುಳ ಚೀಲದಿಂದ ಪುಸ್ತಕ ಒಂದನ್ನು ಹೊರತೆಗೆದು ಪೇಜುಗಳ ಕಿಸಿದು ನೋಡಲಾರಂಭಿಸಿದೆ.

ನಾನು ಕೂತ ಎದರು ಪಾರ್ಕಿನ ಕಾಂಪೌಂಡಿಗೆ ಸೇರಿದಂತೆ ಎರಡು ಅಂತಸ್ತಿನ ಮಹಡಿ ಕಾಣುತ್ತಿತ್ತು. ಮಹಡಿಯ ಬಲಭಾಗದಲ್ಲಿ ಚಿಮಣಿಯಲ್ಲಿ ಹೊಗೆ ಹೋಗುತ್ತಿದ್ದಂತೆ ಮಹಲಿನ ಕಡೆಯಿಂದ ಬೀಸಿಬಂದ ಗಾಳಿಯಲ್ಲಿ ಮಾಂಸದ ಮಸಾಲೆ ವಾಸನೆ, ಚಪಾತಿ, ಪಲಾವಿನ ಕಂಟು ಮೂಗಿಗೆ ಬಡಿಯಿತು. ಮಹಡಿಯ ಕೆಳಭಾಗದಲ್ಲಿ ಒಂದು ಬಿ. ಸಿ. ಸಿ. ಕಸದ ತೊಟ್ಟಿ ಬಳಿ ಕಜ್ಜಿ ನಾಯೊಂದು ತೊಟ್ಟಿಯನ್ನು ಕಾಯುವಂತೆ ಕೂತು, ತನ್ನ ಒಣ ಮೈಯನ್ನು ಆಗಾಗ ಶ್ರಮ ವಹಿಸಿ ತರಚಿ ಕೊಳ್ಳುತ್ತಿತ್ತು. ಮಹಡಿಯ ಕಿಟಕಿಯಿಂದ ಹೊರಬರುತ್ತಿದ್ದ ವಾಸನೆಯನ್ನು ಗಮನಿಸಿದ ನಾಯಿ ಮನಸಾರೆ ವಾಸನೆ ಕುಡಿದು ಮಹಡಿಯತ್ತ ತಲೆ ಎತ್ತಿ ವಿಚಿತ್ರವಾದ ಧನಿಯಲ್ಲಿ ಅಳಲಾರಂಬಿಸಿತು.

ಮಹಡಿಯ ಕಿಟಕಿಯಲ್ಲಿ ದಪ್ಪ ದೇಹದ ಜನ ತಿನ್ನುತ್ತಾ ಕುಡಿಯುತ್ತಾ, ಗುಜಗುಜನೆ ಗಲಾಟೆ ಮಾಡಿ, ಪದ ಹೇಳುತ್ತಿದ್ದರು. ಆ ಜನಕ್ಕೆ ಕಷ್ಟದ ಅರಿವೇ ಇಲ್ಲದಂತೆ ಕಂಡಿತು. ಆದರೆ ಕೆಳಗಿದ್ದ ನಾಯಿ ಒಂದೇ ಸಮನೆ ಅಳುತ್ತಿರುವುದನ್ನು ಗಮನಿಸಿದ ದಪ್ಪ ಮೀಸೆಯ ಮನುಷ್ಯನೊಬ್ಬ ತನ್ನ ದವಡೆಯಲ್ಲಿ ಅಗಿಯುತ್ತಿದ್ದ ಗಂಟು ಮೂಳೆಯನ್ನು ನಾಯಿಯತ್ತ ಬಿಸಾಡಿದ. ನಾಯಿ ತೀವ್ರ ಸಂತೋಷದಿಂದ ಬಾಲ ಅಲ್ಲಾಡಿಸಿ ಒಂದೇಸಮನೆ ಅಗಿದು ನುಂಗಿತು. ಮತ್ತೆ ತಲೆ ಮೇಲೆತ್ತಿ ಅಳಲಾರಂಭಿಸಿತು. ಇದನ್ನು ಎಲ್ಲಾ ಮನುಷ್ಯರು ನೋಡಿ ಖುಷಿಪಟ್ಟರು. ಕೆಲವರು ಯಾವುದೋ ವಿಚಿತ್ರ ಪ್ರಾಣಿ ಕಂಡವರಂತೆ ಮೂಳೆ ಎಸೆದು ಆಟ ಆಡಿಸತೊಡಗಿದರು.

ಸ್ವಲ್ಪ ಹೊತ್ತಾಯಿತು. ಓರ್ವ ದಾಂಡಿಗ ದಪ್ಪ ಹೊಟ್ಟೆ ಹೊತ್ತು ಕಿಟಕಿಯಿಂದ ಕತ್ತನ್ನು ಹೊರಚಾಚಿ ಹೊಟ್ಟೆಯಲ್ಲಿ ಆಗತಾನೆ ತಿಂದಿದ್ದನೆಲ್ಲ ಕಕ್ಕಿದ. ವಿಸ್ಕಿ–ರಮ್ಮಿನ ಹುಳಿಹುಳಿಯಾದ ವಾಸನೆ ಮೂಗಿಗೆ ಬಡಿಯಿತು. ಕೆಳಗಿದ್ದ ನಾಯಿ ತುಂಬಾ ಹರ್ಷದಿಂದ ಹಸಿದ ನಾಲಿಗೆ ಚಾಚಿ ಮನಸಾರೆ ನೆಕ್ಕಿತು. ಸ್ವಲ್ಪ ಹೊತ್ತಿನ ನಂತರ ತನ್ನ ಮೈಗೆ ಶಕ್ತಿ ಬಂದಂತೆ ಆಕಾಶದತ್ತ ಮುಖ ಎತ್ತಿ ಎತ್ತರದ ಧನಿಯಲ್ಲಿ ಬೊಗಳತೊಡಗಿತು.

ನಾಯಿ ಮೆದುಳಿಗೆ ಆಲ್ಕೊಹಾಲ್‌ನ ನಿಷ ತುಂಬಿರಬೇಕು. ಹುಚ್ಚುನಾಯಿಯಂತೆ ಗರಗರ ತಿರುಗಿ, ವಿಚಿತ್ರವಾಗಿ ಬೊಗಳಿ ಲೊಚ ಲೊಚನೆ ಮತ್ತೆ ವಾಂತಿಯನ್ನು ನೆಕ್ಕಲಾರಂಭಿಸಿತು.

ಸ್ವಲ್ಪ ಹೊತ್ತಿನ ಮೇಲೆ ಅದೇ ವ್ಯಕ್ತಿ ಮತ್ತೆ ಜಠರಕ್ಕೆ ತುಂಬಿದ್ದ ಎಲ್ಲಾ ಆಹಾರವನ್ನು ವಾಂತಿ ಮಾಡಿದ. ಕಜ್ಜಿನಾಯಿ ನೆಕ್ಕುವುದನ್ನು ನಿಲ್ಲಿಸಲೇ ಇಲ್ಲ. ಸ್ವಲ್ಪ ಹೊತ್ತಿನ ನಂತರ ನಾಲ್ಕಾರು ಕಾಗೆಗಳು ಅನ್ನವನ್ನು ತಿನ್ನುತ್ತಾ ನಾಯಿಮೇಲೆ ಕೂತುಕೊಂಡವು. ನಾಯಿಗೆ ಕಾಗೆ ಕೂತಿರುವುದೂ ಕೂಡ ತಿಳಿಯಲಿಲ್ಲ. ಅಷ್ಟರಲ್ಲಿ ಮತ್ತೊಂದು ನಾಯಿ ಓಡಿ ಬಂದು ಹೊಟ್ಟೆ ತುಂಬಾ ತಿಂದು ತಲೆ ತಿರುಗಿದ್ದ ಕಜ್ಜಿ ನಾಯಿಯನ್ನೂ ಇಟ್ಟಿಬಂದಂತೆ ಕಚ್ಚಿತು. ಅದರ ಬಾಯಿಯಿಂದ ತಪ್ಪಿಸಿಕೊಂಡು ಪಾರ್ಕಿನ ಬೇಲಿ ನುಗ್ಗಿ ನನ್ನತ್ತ ಓಡಿ ಬರುತ್ತಿರುವ ನಾಯಿಯನ್ನು ಮಹಡಿಯ ಜನ ನೋಡಿ ಮತ್ತಷ್ಟು ನಗುತ್ತಿದ್ದರು. ಆ ನಗುವೂ ಮತ್ತು ಆ ನಾಯಿಯೂ ನನ್ನನ್ನು ಅಟ್ಟಿಸಿಕೊಂಡು ಬರುತ್ತಿರುವಂತೆನ್ನಿಸಿ ಪಾರ್ಕಿನಿಂದ ಕಾಲು ಕಿತ್ತು ನಿಂತೆ.

—ಬಾನಂದೂರು ಕೆಂಪಯ್ಯ

---

## "ನಾಯಕ"ನೆಂಬುವವನಿಗೆ

ಜಂಬಣ್ಣ ಅನುರಚಿಂತ

ಮಾತಾಡೊ ಮಾತಾಡೊ ನಾಯಕ । ನೀ
ಮಾತಾಡಲೊಲ್ಲೋಕೊ ನಾಯಕ ?
ಮೌನದ ಕೆಸರಾಗ ಹೂವಂಥ ನಿನದನಿ
ಎಬ್ಬಿಸಿ ತೋರಿಸೋ ತಡಾಕ

ಗುಡುಗಾಡೊ ಗುಡುಗಾಡೊ ನಾಯಕ । ನೀ
ಗುಡುಗಾಡೆಲೊಲ್ಲೋಕೊ ನಾಯಕ ?
ಗುಡುಗು ಗುಡಿಗಿ ಒಮ್ಮೆ ಮಿಂಚಾಗಿ
ಬಾ, ಕತ್ತಲಿನ ಎದೆಯ ಸೀಳಾಕ

ಉರಿದೇಳೊ ಉರಿದೇಳೊ ನಾಯಕ । ನೀ
ಉರಿದೇಳಲೊಲ್ಲೋಕೊ ನಾಯಕ ?
ಉರಿವ ಎದೆಯುರಿ ಎಂಥದೆಂಬುದು
ತೋರಿಸೋ ಸಿರಿವಂತ ಜಗಕ

ಎದ್ದೇಳೋ ಎದ್ದೇಳೊ ನಾಯಕ । ನೀ
ಎದ್ದೇಳಲೊಲ್ಲೋಕೊ ನಾಯಕ ?
ಎದ್ದರೆ ಹೆಗಲೇರಿದ ನಾಯಿಗಳೆಲ್ಲ
ಬಿದ್ದಾವು ತೊಪ ತೊಪ ಕಡೇಕ

ನಿನ್ನ ಬೋಳಿ ತನವ ನೋಡಿ ನಾಯಕ
ಅವ್ರು ಒಳಗೊಳಗ ನುಂಗ್ಯಾರ ಗಪಕ
ನಿನ ಮೂತಿಗೆ ಅಂಗೈ ಮುಸ್ರೆ ಒರಸಿ
ತಿಂದನಂತ ತೋರಿಸ್ಯಾರೊ ಜಗಕ

ವರದಿಯಲ್ಲಿ ಉದ್ದಾರ ನಾಯಕ
ತಾಳಿಗಿಡದಂಗ ಬೆಳಿಸ್ಯಾರ ಉದ್ದಕ
ದೂರ ಉಳುದಾದೋ ಫಲದ ಮಾತು
ನರಳು ಸ್ವತೆ ಇಲ್ಲ ಕುಂದುರಾಕ

ಯಕಡೆ ನೋಡಿದ್ರು ಕಡೆ ನಾಯಕ
ನಮ್ ಕೊಲೆ ಮಾಡೋದೊಂದವ್ರು ಕಾಯಕ
ಸಾವು ಸುಮ್ಮನಿತ್ತು ಸಮಾಜಕೊಂದಿತ್ತು
ಜೀವಂತ ಸಾವು ಅದು ನರನರಕ

ಬದಲಾಗೊ ಬದಲಾಗೊ ನಾಯಕ ನೀ ।
ಬದಲಾಗೊ ತಕ್ಕಂತೆ ಕಾಲಕ
ಕಣ್ ಕಿವಿ ಮೂಗು ಬಾಯಿ ಮುಚ್ಕೆಂಡು
ಏಸುದಿನ ಕುಂದರು ತಿದ್ದಿ ಸುಮ್ಮಕ

ದಿನ ಬಂತು ದಿನ ಬಂತು ನಾಯಕ । ನೀ
ಬದಲಾಗೊ ದಿನಬಂತು ನಾಯಕ
ಹದಗೊಂಡ ಭೂಮ್ಯಾಗ ಎದಿಬೀಜ ಬಿತ್ತಯ್ಯ
ಹೇಳಲಿಲ್ಲಂತನ ಬ್ಯಾಡಮ್ಯಾಕ

(ಪ್ರೇರಣೆ : ಬೇಂದ್ರೆಯವರ 'ಮಾತಾಡೊ ಲಿಂಗವೆ' ಎಂಬ ಕವನ)

## ಕೆ. ಜಿ. ಎಫ್. ನರಹತ್ಯೆ

# ದಲಿತರ ಜಲಿಯನ್ ವಾಲಾಬಾಗ್

ಕಳೆದ ಜುಲೈ ತಿಂಗಳು ಒಂದು ಕರಾಳ ತಿಂಗಳು. ನಾನು ಕೋಲಾರದ ಹಾರೋಹಳ್ಳೀಲ್ಲಿದ್ದೆ. ಒಂದು ಮುಂಜಾವು ಕೆ. ಜಿ. ಎಫ್. ಕಡೆಯಿಂದ ಬೆಂಗಳೂರ ಕಡೆಗೆ ಸಾಲು ಸಾಲು ಪೋಲಿಸ್ ವ್ಯಾನುಗಳು ಖಾಲಿಯಾಗಿ ಹೋದುದ ಕಂಡೆ. ಪ್ರತಿ ವ್ಯಾನಲ್ಲೂ ಡ್ರೈವರ್ ಹೊರತು ಮತ್ತ್ಯಾರು ಇರಲಿಲ್ಲ. ನನಗಂತು ಸೋಜಿಗ. ಯಾವ್ದೂ ಅರ್ಥವಾಗದೆ ರಸ್ತೆ ಬದೀಲಿ ಖಾಲಿ ವ್ಯಾನುಗಳ ನೋಡ್ತ ನಿಂತೆ.

ಅದೇ ಹಳ್ಳಿಯವನೊಬ್ಬ ನಾನು ನಡುರಸ್ತೇಲಿ ನಿಂತುದ ಕಂಡು "ಏನ್ನೋಡ್ತೀರಿ ವೋಗ್ರಿ ಸ್ವಾಮಿ ಅವೆಲ್ಲ ಹೆಣಗಳು" ಎಂದ.

"ಏನು ?" ಎಂದೆ.

"ಹೆಣ ಸಾಗಿಸ್ತವ್ರೆ ಪೋಲಿಸ್ರು. ಸಕತ್ತು ಗೋಲಿಬಾರು ಕೆ. ಜಿ. ಎಫ್. ನಲ್ಲಿ"

ನಮ್ಮ ನಡುವೆ ಮಾತು ನಡೀತಿದ್ದಾಗ ಮತ್ತ್ಯಾವನೋ ಒಬ್ಬ ಹೇಳಿದ :

"ನೆನ್ನೆದಿನ ಜನ ಸಬ್‌ಇನ್‌ಸ್ಪೆಕ್ಟರ್ ಮನೆಗೆ ನುಗ್ಗಿ ಅವನ ಹೆಂಡ್ರು ಮಕ್ಕಳಿಗೆ ಹೊಡೆದ್ರಂತೆ."

ಹೆಣಗಳು, ಪೋಲಿಸರು, ಗೋಲಿಬಾರು ಮುಂತಾದ ಪದಗಳು ನನ್ನ ಮೈ ಮನಸ್ಸುಗಳಿಗೆ ಬೆಂಕಿ ಹಚ್ಚಿದ್ವೊ. ಕಾಂಗ್ರೆ ರಕ್ತಸಿಕ್ತ ಕೈಗಳು ಕಣ್ಮುಂದೆ ತೇಲುತ್ತಾ ಇದ್ವೊ. ಹಾಗೇ ನಮ್ಮ Camp ನಡೀತಿದ್ದ ಕಡೆಗೆ ಬಂದೆ. ಕಣ್ಣು ಕಿವಿ ನಾಲಗೆ ಕಳಕೊಂಡ ನಮ್ಮ ಪತ್ರಿಕೆಗಳು ಕೇವಲ "ಹನ್ನೆರಡು ನರಬಲಿ" ಅಂತ ವರದಿ ಮಾಡಿದ್ವೊ. ಮಿದುಳು ಮನುಷ್ಯತ್ವ ಎರಡೂ ಇಲ್ಲದ ಕೆಲವರು ಗೋಕಾಕ್‌ವರದಿಗು ಗೋಲಿಬಾರಿಗೂ ಸಂಬಂಧ ಕಲ್ಪಿಸುತ್ತ "ಕನ್ನಡ ರಕ್ಷಣೆಗಾಗಿ ಪೋಲಿಸರು ಕೊಲೆ ಮಾಡಿದರು. ಇಂಥಾ ಕೊಲೆಗಳು ಯಾವಾಗಲು ಆಗುತ್ತಿರಲಿ........ಹಾಗಾದ್ರೇನೆ ಕನ್ನಡ ಉಳಿಯೋದು" ಎಂದು ಕೆಲವರು ತಮ್ಮ ಗೊಡ್ಡುವಾದ ಮಂಡಿಸುತ್ತಿದ್ದರು.

ಅಂದು ರಾತ್ರಿ ಕೆ. ಜಿ. ಎಫ್.ನಿಂದ ಬಂದ ಕೆಲವರ ಜತೆ ಮಾತಾಡಿದೆ. ಅಲ್ಲೇನಾಗ್ತಿದೆ ? ನಿಜಸ್ಥಿತಿ ಏನು ? ಎಂದು ಪ್ರಶ್ನಿಸಿದೆ.

"ನಡುಬೀದೀಲಿ ಕೊಲೆಗಳಾಗ್ತ ಇವೆ. ಹೆಂಗಸ್ರು ಮಕ್ಕಳು ಮುದಕರು ಎಲ್ಲಾರ್ನು ಮನೆವಳಗಿಂದ ಎಳತಂದು ಬೀದೀಲಿ ಕೊಲ್ತಾರೆ. ಈ ಪೋಲಿಸ್ ರಾಕ್ಷಸರಿಗೆ ನ್ಯಾಯ ನೀತಿ ದೇವರು ದಯಾ ಧರ್ಮ ಒಂದೂ ಇಲ್ಲ. ಅವ್ರೇನು ನರಮನ್ಸರೊ ರಾಕ್ಷಸ್ರೊ ಒಂದೂ ಗೊತ್ತಾಗಲ್ಲ"

"ಕನ್ನಡ ಬ್ಯಾಡಂತೇನಾರು ಚಳವಳಿ ಮಾಡ್ತವ್ರ ?"

ಕನ್ನಡ–ತಮಿಳು ಒಂದಕ್ಕು ಅಲ್ಲ ಸ್ವಾಮಿ. ಬರೀ ರಾಜಕೀಯ. ಆರ್ಮುಗಮ್ಮು ಅವನ ಕಡೆ ಗೂಂಡಾಳಗು ತಮಿಳ್ನವ್ರೆಲ್ಲ ಕನ್ನಡದೋರ ಮೇಲ ಬಿಳ್ರಿ ಅಂತ ವಳಗೆ ಇಕ್ಮತ್ತು ಮಾಡುದ್ರು. ಆದ್ರೆ ಬಡವರಿಗ್ಯಾತರ ಬಾಸೆ ಸ್ವಾಮಿ. ಅವ್ರಿಗೆ ಕನ್ನಡನು ಬ್ಯಾಡ ತಮಿಳೂ ಬ್ಯಾಡ ಹೊಟ್ಟೆ ಬಟ್ಟೆಗಿದ್ರೆಸಾಕು.

ಗೋಕಾಕ್‌ವರದಿ ಬಗ್ಗೆ ನಿಮಗೇನಾರು ಗೊತ್ತಾ

"ಅಂಗಂದ್ರೇನು ಸ್ವಾಮಿ ?"

"ಎಲ್ರು ಕನ್ನಡ ಕಲೀಬೇಕು ಅದ್ನೆ ಮಾತಾ ಬೇಕು. ಎಲ್ಲಾ ಸ್ಕೂಲುಗಳಲ್ಲು ಕನ್ನಡಾನ ಎ ಮಕ್ಳು ಕಲಿಯಲೆಬೇಕು. ಅಂತಿರೋ ಒಂ ರೂಲ್ಸ್."

"ವೋ ನಂಗೊತ್ತಿಲ್ವಲ್ಲ."

ಆ ಮುದುಕನಿಗೆ ಮಾತ್ರವಲ್ಲ ಅವನಂಥ ಬಹ ಪಾಲು ಕೂಲಿಗಳಿಗೆ ಗೋಕಾಕ್‌ವರದಿಯ ಒಂದ ರವೂ ಗೊತ್ತಿಲ್ಲ. ಆದರೆ ಗೋಲಿಬಾರ್‌ನಿಂದಾ ಸಾವುನೋವು ದುಃಖಗಳು ಆತನನ್ನ ಕಿತ್ತು ತಿನ ತ್ತಿವೆ.

"ಸುಮಾರು ಎಷ್ಟು ಜನ ಸತ್ತಿರಬಹುದು ?"

"ನೂರಾರು ಜನ ಸತ್ತವ್ರೆ ಸ್ವಾಮಿ ಲೆಕ್ಕ ಹೆಂ ಡನ ?" ಎಂದ.

ನನಗಂತು ಬೆಂಕಿ ನುಂಗಿದಂಥ ಸಂಕಟ.

"ಕಮ್ಮಿ ಅಂದ್ರೂ ೩೦೦–೪೦೦ ಜನ ಸತ್ತವ್ರೆ ಸಾರ್" ಎಂದ ಹದಿಹರಯದ ಹುಡುಗನೊಬ್ಬ

"ಅದ್ರಲ್ಲಿ ನೂರಕ್ಕೆ ತೊಂಬತ್ತೊಂಬತ್ತು ಜನ ದಲಿತರು" ಎಂದ ಮತ್ತೊಬ್ಬ ಯುವಕ.

ಕಿವೀಲಿ ಕಾದ ಸೀಸ ಸುರಿದಂಥ ಅನುಭವವಾಯ್ತು.

ಜನರ ಧಮನಕ್ಕಾಗಿ ಬಂದೂಕ ಬಳಸುತ ಪೋಲೀಸರು ಮತ್ತು ಸರ್ಕಾರ ನನಗೆ ರಕ್ತಪಿಶಾಚಗಳಂತೆ ಕಂಡವು. ಚರಿತ್ರೆಯ ಜಲಿಯನ್ ವಾಲಾಬಾಗ್ ದುರಂತವು ಕೋಲಾರದ ಕೆ. ಜಿ. ಎಫ್. ನಲ್ಲಿ ಮರುಕಳಿಸಿದೆ. ಬೆಂಗಳೂರಿನ ವಿಲ್ಸನ್‌ಗಾರ್ಡನ್ ನಲ್ಲಿ ನೂರಾರು ಹೆಣಗಳನ್ನು ಪೋಲೀಸರು ಸುಟ್ಟಿ ರುವುದನ್ನು ಕಣ್ಣಾರೆ ಕಂಡವರಿದ್ದಾರೆ. **ಮು. ನಾ**

# ಕುಷ್ಠ ಮರ ಗಣಪತಿಯಾದದ್ದು !

ಇಂಡಿಯಾದಂಥ ದರಿದ್ರ ನಾಡಿನಾಗ ಇರೋವಷ್ಟು ಗೊಡ್ಡುತನಗಳು ಬೇರೆಲ್ಲೂ ಇರಲಿಕ್ಕಿಲ್ಲ. ಉಚ್ಚೆ ಒಯ್ಯ್ಯಾಗಲೂ ಆಚಾರ–ವಿಚಾರದ ಲೆಕ್ಕ ಹಾಕೋ ಜನ ಇನ್ನು 'ದೇವ್ರುರೂಪ' ಕಂಡ್ರೆ ಸುಮ್ಮನಿದ್ದಾರೆಯೆ ? ರೋಡು ಗೀಡು ಏನೂ ಲೆಕ್ಕಿಸದೇ ನಿಂತಮಕ್ಕೆ "ಡೈ" ಹೊಡೆದೇ ಬಿಡ್ತಾರೆ.

ಇಂಥ ಡೈ, ತುಮಕೂರು ಜಿಲ್ಲೆಯ ಮಧುಗಿರಿಯಲ್ಲೀಗ ಕಾಣ್ಬೋದು. ಇಲ್ಲಿನ ಡೋಮ್‌ಲೈಟು ಸರ್ಕಲ್ ಬಳಿ ಕುಷ್ಠರೋಗದಂತಿರೋ ಒಂದು ಕೆಂಕೇಸರಿ ಮರ ಇದೆ. ಯಾವನೋ ಸನ್ಯಾಸಿ ಆ ಮರದ ಕುಷ್ಠರೋಗದಂತ ಕಾಂಡ ನೋಡಿ "ಇದು ಗಣಪತಿ" ಅಂತ ಕರೆದ. ಕರೆದಿದ್ದಷ್ಟೇ ಅಲ್ಲ ಕೈಯ್ಯಮುಗಿದ, ಡೈಯೂ ಹೊಡ್ದ. ಇಲ್ಲಿಂದ ಸುರುವಾಯ್ತು ಕುರಿಬಿದ್ದ ಜಾಡು. ಮನುಷ್ಯನಿಗೆ ಜೋಪಡಿ ಇಲ್ದೆ, ಬಿಸಿಲು ಮಳೆ ಛಳೀಗೆ ಸಾಯ್ತ ಇರೋ ಈ ಇಂಡಿಯಾದಾಗೆ ಇಂಥ ಅನಿಷ್ಟ ದೇವ್ರಗೆ ಗುಡಿ ಎದ್ದೋಳ್ತಹೈತೆ.

ಆ ಕೆಂಕೇಸರಿ ಮರದಡೀಲಿ ಬಹಳಾ ವರ್ಷಗಳಿಂದ ಮೆಟ್ಟು ಹೊಲಿದು ಹೊಟ್ಟೆವರಿದ ಮೋಚಿ ಬಗ್ಗೆ ಯಾವ ನರಪಿಳ್ಳೆಗೂ ಕನಿಕರ ಇಲ್ಲ. ಮೋಚಿನಾ ಅಲ್ಲಿಂದ ಜಾಗ ಬಿಡಿಸಿದ್ರು. ಜಾಗ ಬಿಡಿಸುವಾಗ ಅವನಡಿಯಿಂದ ಜೀವಂತ ಇಲಿ ಓಡಿಹೋಯ್ತು. ಭಕ್ತ ಭೇಕೂಫಗಳಿಗೆ ಇನ್ನೂ ಖುಷಿ ಆಯ್ತು. ಗಣಪತಿ ಇರೋದು ಸ್ತಿರವಾಯ್ತು.

ಅಲ್ಲಾ ಸ್ವಾಮಿ, ಇಲಿ ಇದ್ದದ್ದು ಮೋಚಿ ಅಡಿಲ ತಾನೆ ? ಹಾಗಾದರೆ ಯಾರು ಗಣಪತಿ ? ನಿಜಕ್ಕೂ ಯಾರಿಗೆ ಪೂಜೆ ಸಲ್ಲಬೇಕಿತ್ತು ? ಆ ಮರಕ್ಕೇನು ? ಮೋಚಿಗಲ್ವೆ ? ಎಲ್ಲಕ್ಕೂ ಲೆಕ್ಕಚಾರ ಹಾಕೋ ಜನ ಕಂಡಂತ ಸತ್ಯಾನೇ ಕೊಂದು ಬಿಟ್ರು. ಯಾಕೆ ? ಮೋಚಿ ಜನಿವಾರ ಹಾಕದೆ ಉಡದಾರ ಹಾಕಿರೋದಕ್ಕಾ ? ಮತ್ತೇನಕ್ಕೆ ?

—ಮದುಗಿರಿ ಗಂಗರಾಜು

### ಖಾಕಿ ನರಕದಿಂದ ನೋವಿನ ಕೂಪಕ್ಕೆ....

# ಶಿವಯ್ಯ ಮೇಷ್ಟರ ಸ್ವಾತಂತ್ರ್ಯದ ನೆನಪುಗಳು

ಇತ್ತೀಚಿಗೆ ತಗಡೂರಿಗೆ ಹೋಗಿದ್ದಾಗ ಶಿವಯ್ಯ ಮೇಷ್ಟ್ರು ಸಿಕ್ಕಿದರು. ಅದು ಇದು ಮಾತಾಡುತ್ತ ಅವರು ಹಿಂದೆ ತಾವು ಪೋಲೀಸ್ ಕೆಲಸದಲ್ಲಿ ಇದ್ದುದನ್ನು ಹೇಳಿದರು. ಅವರು ರಿಟೈರ್ಡು ಮೇಷ್ಟ್ರು ಮಾತ್ರ ಎಂದು ತಿಳಿದಿದ್ದ ನನಗೆ ಅವರ ಪೋಲೀಸ್ ಮುಖವನ್ನು ಕೂಡ ಊಹಿಸುವುದು ಸಾಧ್ಯವಾಗಲಿಲ್ಲ. ಕುತೂಹಲದಿಂದ ಅವರನ್ನು ಕೇಳಿದೆ.

ಅವರು ಗತಕಾಲದ ಆಳಕ್ಕೆ ಧುಮುಕುತ್ತ, ನೆನಪುಗಳನ್ನು ಕೆದಕುತ್ತ ಅನುಭವವೊಂದನ್ನು ಬಿಚ್ಚಿಡಲು ರೆಡಿಯಾದರು.

"ಯಾವುದ ಯೇಳಲಿ ಯಾವುದ ಬುಡಲಿ ಅಂತ ತಡಕಾಡ್ತ ಇದೀನಿ. ನಾನಾ ಥರ ಅನುಭವಗಳು ಅವೆ. ಪೋಲೀಸ್ ಕೆಲಸದಂಥ ಕಚಡ ಕೆಲಸ ಬ್ಯಾರೆಯಿಲ್ಲ. ಅದ ನಾನು ಯಾಕ್ಬುಟ್ಟೆ ಅನ್ನದ ನಿಮಗೆ ಯೇಳ್ತೀನಿ ಕೇಳಿ. ಆಗಿನ್ನು ಸ್ವತಂತ್ರ ಬಂದಿರಲಿಲ್ಲ. ನಾನಂತು ದಯಾ ಧರ್ಮ ಇಲ್ದ ಪೋಲೀಸ್ ಕೆಲ್ಸಕೆ ಸೇರಿದ್ದೆ. ಅದು ಹೊಟ್ಟೆಪಾಡ್ಗೆ. ಅಂಥ ಪಾಪದ ಕೆಲ್ಸ ಮಾಡದೆ ವಿಧಿಯಿರಲಿಲ್ಲ.

ಆಗೆಲ್ಲ ಬ್ರಿಟೀಸ್ನೋರ ಕಾಲ. ಅವ್ರು ಕಾಲಲ್ಲಿ ತೋರಿದ್ನ ನಾವು ಕೈಲಿ ಮಾಡ್ತಿದ್ವೊ. ನಾನಾಗ ಮೈಸೂರಲ್ಲಿ ಪೋಲಿಸಾಗಿದ್ದೆ. ಒಂದಿನ ಸ್ವತಂತ್ರ ಹೋರಾಟಕಾರರ ಮೆರವಣಿಗೆ ಬಂತು. ಆ ಥರ ಮೆರವಣಿಗೆಗಳು ದಿನ ತಪ್ಪಿ ದಿನ ಮಾಮೂಲಾಗಿದ್ವೊ. ಮೆರವಣಿಗೆ ಬರೋದು, ನಾವು ಅಂದ್ರೆ ಪೋಲಿಸ್ನೋರು ಮೆರವಣಿಗೆ ಬಂದೋರಿಗೆ ಹೊಡಿಯೋದು ಅದೆಲ್ಲ ಮಾಮೂಲು ಕಸುಬಾಗಿತ್ತು.

ಮೇಲಧಿಕಾರಿಗಳ ಮೆಚ್ಚಕೆ ನಾವು ಶೂರರಂಗೆ ಹೊಡ್ದು ಬಡ್ದು ಮಾಡ್ತಿದ್ವೊ. ಆದ್ರೆ ಒಳಗಿನ ಕರುಳೆಲ್ಲ ಚುರ್ರಂತ ಉರಿಯೋದು. ಅದ್ಯಾರು ಹೋರಾಟ ಮಾಡ್ತಿರೋರು ? ಅವ್ರೆಲ್ಲ ನಮ್ಮ ಜನವೇನೆ, ಎಲ್ಲ ಒಂದೇ ದೇಶದವರು ಎಲ್ಲರಿಗೂ ಒಬ್ಬಳೆ ಭಾರತಮಾತೆ. ಯಂಗಿದ್ರು ನಾವು ನಮ್ಮ ನಮ್ಮ ಜನರ ರಕ್ತನೇ ಚೆಲ್ಲಬೇಕಾಗಿತ್ತು, ಅವ್ರ ಬುರುಡೇನೆ ಹೊಡೀಬೇಕಾಗಿತ್ತು. ಇದಂತು ಹೇಸ್ಗೆ ಕೆಲಸ. ಹಂಗಂತ ಕೆಲಸ ಬುಡನ ಅಂದ್ರೆ ಒಂದೂತ್ನ ಕೂಳು ಸಿಗದೂ ಕಷ್ಟ. ಅವತ್ತು ಪೋಲೀಸ್ ಟೇಸನ್ನಲ್ಲಿ ಜನಗಳನ್ನ ಕುರಿಗಳ ತುಂಬಿದಂಗೆ ತುಂಬಿದ್ವೊ. ಮನೆ ಮನೆಗೆ ನುಗ್ಗಿ ಪೋಲೀಸ್ ಹಲ್ಲೆ ನಡೆಸಿದ್ದ ನಾವು ಸಾಕಪ್ಪು ಸುಸ್ತಾಗಿದ್ವೊ. ಒಳಗಡೆ ಜನಗಳ ಗೋಳ ನೋಡಲಾಗ್ತಿರಲಿಲ್ಲ. ಒಬ್ಬನಿಗೆ ತಲೆಯೊಡ್ದಿತ್ತು. ಒಬ್ಬನಿಗೆ ಕಾಲು ಮುರಿದಿತ್ತು. ಹಂಗೇನೆ ಒಬ್ಬೊಬ್ರಿಗೆ ಒಂದೊಂದು ಅಂಗ ಊನವಾಗಿತ್ತು. ತಲೆ ಒಡೆದೋಗಿದ್ದ ಹುಡುಗನಿಗೆ ಸ್ಯಾನ ಸೀರಿಯಸ್ಸಾಗಿತ್ತು. ಪ್ರಾಣ ಈಗಲೋ ಆಗಲೋಅಂತಿತ್ತು.

ನಮ್ಮಾಫೀಸರ್ರು ಅವನ್ನ ನನ್ನ ಕೈಗೊಪ್ಸಿ, ಅವನ ಮನೆ ಅಡ್ರಸ್ಸು ಕೊಟ್ಟು "ಅವನ್ನ ಮನೆಗೆ ಬಿಟ್ಬಿಡು" ಅಂದ್ರು. ನಾನು ಅವರಾಜ್ಞೆ ಸಿರಸಾವಹಿಸಿದೆ. ಮನೆ ತಲುಪಿದ ಮೇಲೆ ವಸಿ ಹೊತ್ತು ಅವನ ಜೀವ ಆಡ್ತ ಇತ್ತು. ಆಮೇಲೆ ಅವನು ಹೆಣವಾದ ಸ್ವಾಮಿ. ಆ ಮನೆ ಜನಗಳ ದುಃಖ ನೋಡಕಾಗ್ದೆ ಅಲ್ಲಿಂದ ಕಾಲು ಕಿತ್ತೆ.

ಅದಾಯ್ತು. ಮೈಸೂರಿಂದ ಹೇಳ್ದೆ ಕೇಳ್ದೆ ಊರಿಗೆ ಬಂದೆ. ಖಾಕಿ ಡ್ರಸ್ಸು ಬಿಚ್ಚಿ ಬಿಸಾಕಿ ಕರ್ಮ ಕಳೀತು ಅಂದ್ಕಂಡೆ. ಆಮೇಲೆ ಮೇಷ್ಟ್ರ ಕೆಲಸ ಸಿಕ್ಕಿ ಹೆಂಗೋ ಉಸುರಾಡ್ಕೊಂಡು ಬಂದೆ. ಈಗ ಹೆಂಗೋ ನಡೀತಾ ಅದೆ ರಿಟೈರ್ಡ್ ಲೈಫು"

**ಮುಳ್ಳೂರು ನಾಗರಾಜು**

ಮೇಷ್ಟ್ರು ಹೇಳಿದ ಘಟನೆಗಳು ನನ್ನ ಕಣ್ಣ ಮುಂದೆಲ್ಲ ಓಡಾಡಿದ ಹಾಗಾಯ್ತು. ಅವರ ಅನುಭವಗಳ ಧಾಳಿಯಿಂದ ಬಿಡಿಸಿಕೊಳ್ತ ಒಂದು ಪ್ರಶ್ನೆ ಹಾಕಿದೆ :

"ಮೇಷ್ಟ್ರೆ ನಿಮ್ಮ ಮೇಷ್ಟ್ರು ಜೀವನದಲ್ಲಿ ಬಂದಿರಬಹುದಾದ ಅಸ್ಪೃಶ್ಯತೆಯ ಕಹಿ ಅನುಭವಗಳನ್ನ ಒಂಚೂರು ಹೇಳ್ತೀರ ?"

"ಅದಕೇನಳಿ ಮಸ್ತಾಗವ ಕೇಳಿ" ಎಂದವರು ತಮ್ಮ ನೋವಿನ ಅನುಭವ ಹೇಳತೊಡಗಿದರು. ನಾನು ಮಯ್ಯೆಲ್ಲ ಕಿವಿಯಾದೆ.

"ಈಗ್ಗೆ ಮುವತ್ತು ವರ್ಷಗಳ ಹಿಂದಿನ ಮಾತು. ನಾನಾಗ ಇದೇ ನಂಜನಗೂಡು ತಾಲ್ಲೂಕು ದೇವರಸನ ಹಳ್ಳೀಲಿ ಪ್ರೈಮರಿ ಸ್ಕೂಲು ಮೇಷ್ಟ್ರಾಗಿದ್ದೆ. ಹೊಲೇರಪ್ನು ಮೇಷ್ಟ್ರಾಗಿ ಬತ್ತಾನೆ ಅಂತ ಗೊತ್ತಾದ ಕೂಡ್ಲೇ ಅವೂರ್ನ ಮೇಲ್ಜನ ತಮ್ಮ ಮಕ್ಳನ್ನ ಸ್ಕೂಲು ಬುಡುಸಿ ಬುಟ್ರು. ನಾನು ಅವೂರಲ್ಲಿ ಠಿಕಾಣಿ ಹೊಡಬೇಕಾಯ್ತು. ಅಲ್ಲೊಂದು ರೂಮು ಕೂಡ ಸಿಕ್ಲಿಲ್ಲ. ರೂಮು ಬ್ಯಾಡ ಕೊಟ್ಗಿಲಾರು ಇಳ್ಸಿದ್ದೆ. ಯಾರೂ ಜಾಗ ಕೊಡ್ಲಿಲ್ಲ.

ನಮ್ಮೋರ ಮನೆಲಾರು ಜಾಗ ಸಿಗ್ಬಹುದು ಅಂದ್ಕಂಡಿದ್ದೆ. ಆದ್ರೆ ನಮ್ಮೋರೆಲ್ಲ ಜಾಗನು ಕೊಡ್ಲಿಲ್ಲ; ದೂರಾನು ಮಾಡುದ್ರು. ಯಾಕಂದ್ರೆ ಊರ್ನಲ್ಲಿ ಮೇಲ್ಜನರ ದರ್ಬಾರು ನಡೀತಿತ್ತು. ಅವರಿಗೆ ಯಾರಾದ್ರೂ ವಿರುದ್ಧವಾದ್ರೆ ಭಾರೀ ಕಿರುಕುಳ ಅನುಭವಿಸ ಬೇಕಾಗಿತ್ತು. ಅದ್ಕಾಗಿ ನಾನು ಸ್ಕೂಲಲ್ಲೇ ಉಳಕಳ್ತಿದ್ದೆ. ಆದ್ರೆ ಅಡಿಗೆ ಮಾಡ್ಕಳಕೆ ಅನುಕೂಲ ಇರ್ಲಿಲ್ಲ. ಪ್ರತಿ ಶನಿವಾರ ಊರಿಗೆ ಹೋಗ್ತಿದ್ದೆ. ಬರೋವಾಗ ಸೋಮವಾರ ಮಧ್ಯಾಹ್ನ ಹತ್ತು-ಹನ್ನೆರಡು ಜೋಳದ ಮುದ್ದೆ ಕಟ್ಕೊಂಡು ದೇವರಸನಳ್ಳಿಗೆ ತಲುಪ್ತಿದ್ದೆ. ಮುದ್ದೆ ಜೊತೆಗೆ ಉಪ್ಪೆಸರಿನ ಖಾರ ಅರೆಸಿಕೊಂಡು ತರ್ತಿದ್ದೆ. ಈ ಮುದ್ದೆ ಮತ್ತು ಖಾರ ನನ್ನ ಒಂದು ವಾರದ ಊಟವಾಗ್ತಿತ್ತು. ಸೋಮುವಾರ ರಾತ್ರಿ ಊಟ ಮಾಡ್ತಿರಲಿಲ್ಲ. ಮಂಗಳವಾರದಿಂದ ಶನಿವಾರ ಬೆಳಗ್ಗವರೆಗೆ ಕಲ್ಲಂತ ಹಿಟ್ಟು ಖಾರ ತಿಂತಿದ್ದೆ. ಮೂರ್ನಾಕು ದಿನವಾದ ಮೇಲೆ ಹಿಟ್ಟು ಬುಷ್ಟ ಕಟ್ತಿತ್ತು. ಅದು ಬುಷ್ಟ ಬಂದು ಹುಳಗಳು ಮೊತಗುಡುವಂಥ ಸ್ಥಿತಿಯಾದ್ರೂ—ಅದನ್ನೆ ಕಣ್ಣು ಮುಚ್ಚಿಕೊಂಡು ಉಣ್ತಿದ್ದೆ.

ನಮ್ಮ ಸ್ಕೂಲ್ಗೆ ಒಂದಿನ ಸ್ಕೂಲ್ ಇನಿಸ್ಪೆಕ್ಟರು ಬಂದ್ರು. ಅವರು ಯಾರದೊ ಕಂಪ್ಲೇಂಟು ಮೇಲೆ ಬಂದಿದ್ರು.

"ಏನ್ರೀ ಮೇಷ್ಟ್ರೆ ಸ್ಕೂಲು ಸರಿಯಾಗಿ ನಡುಸ್ತಿಲ್ವಂತೆ ?" ಎಂದು ಪ್ರಶ್ನಿಸಿದರು.

ನಾನು ಎರಡು ಕೈ ಜೋಡ್ಸಿ ತಲೆಬಾಗಿ ಯಿಂಗಂದೆ : ಮಾಸ್ವಾಮಿ ನಾನು ಬಿಸಿ ಹಿಟ್ಟುಂಡು ಎರಡು ವರ್ಷದ ಮ್ಯಾಲಾಯ್ತು. ಈ ಊರಲ್ಲೊಂದು ಮನೆ ಸಿಕ್ಲಿಲ್ಲ. ಅಡುಗೆ ಮಾಡ್ಕಳುವ ಅಂದ್ರೆ ಇಲ್ಲಿ ನೀರು ತಕ್ಕಳಕು ಹೆದ್ರಿಕೆ; ಯಾರಾತ್ತವರು ಈಸ್ಕಳಕು ಹೆದ್ರಿಕೆ. ಈ ಪಾಪಿ ಜಾತೀಲಿ ಹುಟ್ಟುದ ತಪ್ಗೆ ಪಡಬಾರದ ಕಷ್ಟ ಪಡ್ತಿದೀನಿ. ಊರುಗೋಗೋದು ವಾರಕ್ಕೊಂದ್ಸಲ. ವಾರದ ಹಿಟ್ಟು ಬಟ್ಟೆ ಕಟ್ಕೊಂಡು ಬತ್ತೀನಿ. ಅಂತು ಪ್ರಾಣಯುಂಗೆ ಬದುಕ್ತ ಇದ್ದೀನಿ. ಅಂತಂದು ಕಣ್ಣೀರು ಕಚ್ಚಿಕೊಂಡೆ,

ನನ್ನ ಸಂಕಟ ಕಣ್ಣಾರೆ ಕಂಡ ಅವ್ರು ರೆಕ್ಮಂಡು ಮಾಡಿ ಬ್ಯಾರೆ ಊರಿಗೆ ವರ್ಗ ಮಾಡಿಸಿಕೊಟ್ರು. ಅಂತು ನರಕದಿಂದ ಪಾರಾದೆ ಸ್ವಾಮಿ"

ಅನುಭವಗಳು ನನ್ನನ್ನೂ ಸುತ್ತಿರುವಂತನಿಸಿ ಬೇಸರದಿಂದ ಆ ಜಾಗ ಖಾಲಿ ಮಾಡಿದೆ.

# ಸ್ವತಂತ್ರ ಭಾರತದ ದಲಿತೋದ್ಧಾರಕ್ಕೆ ಕೈಗನ್ನಡಿ

ಕರ್ನಾಟಕ ರಾಜ್ಯದಲ್ಲೇ ಅತಿ ಹೆಚ್ಚಿನ ಸಂಖ್ಯೆಯ ದಲಿತರು ಒಂದೇ ಕಡೆ ಕೇಂದ್ರೀಕೃತವಾಗಿ ದೊಡ್ಡ ಹಟ್ಟಿ ಎಂದೇ ಚಿರಪರಿಚಿತವಾದ ತುಮಕೂರಿನ ಎನ್. ಆರ್. ಕಾಲೋನಿ, ಶೋಷಿತರ ಅಸ್ಪೃಶ್ಯರ ಕೂಲಿ ಕಾರ್ಮಿಕರ, ನಿಕೃಷ್ಟ ಸ್ಥಿತಿಯಲ್ಲಿ ನಿರ್ಗತಿಕರಾಗಿ ಸ್ವಾತಂತ್ರ್ಯ ಪೂರ್ವದಿಂದಲೂ ಜೀವನ ಸ್ಥಿತಿಯಲ್ಲಿ ಯಾವ ವಿಧದ ಬದಲಾವಣೆ ಕಾಣದೆ ಸುಮಾರು ಆರು ಸಾವಿರಕ್ಕೂ ಮೇಲ್ಪಟ್ಟ ಜನಸಂಖ್ಯೆಯ ಒಂದು ಬೃಹತ್ ದಲಿತ ಕೇರಿ. ಈ ಕಾಲೋನಿ ಈ ದೇಶದಲ್ಲಿ ದಲಿತೋದ್ಧಾರ ಎಷ್ಟು ಪ್ರಾಮಾಣಿಕವಾಗಿ ನಡೆದಿದೆ ಎಂಬ ಅಣಕಕ್ಕೆ ದೊಡ್ಡ ಹಟ್ಟಿ ನಿದರ್ಶನವಾಗಿದೆ.

ಅನಕ್ಷರತೆ ಅಜ್ಞಾನ ಮೂಢನಂಬಿಕೆಗಳ ಬಂಧಿಗಳಾಗಿ, ದಾರಿದ್ರ್ಯದ ಕ್ರೂರ ಹಿಡಿತಕ್ಕೆ ಸಿಕ್ಕಿ ಗಾಣದೆತ್ತುಗಳಾಗಿ, ದುಡಿಸಿಕೊಂಡು ತಿನ್ನುವ ಈ ದೇಶದ ಮೈಗಳ್ಳ ಶ್ರೀಮಂತರ ಸ್ವತ್ತಾಗಿ ಮಹಿಳೆ ಮಕ್ಕಳಾದಿಯಾಗಿ, ಬೆಟ್ಟದಿಂದ ಸೌದೆ ಹೊತ್ತು, ಮಂಡಿ ಪೇಟೆಯಲ್ಲಿ ಮೂಟೆ ಹೊತ್ತು ಕಠಿಣ ದೈಹಿಕ ಶ್ರಮದ ಕೂಲಿ ಕೆಲಸ ಮಾಡಿಕೊಂಡು ಬೆವರು ರಕ್ತಗಳ ಚೆಲ್ಲಿ ಅಭದ್ರ ಬದುಕಿನ ಸುರುಳಿಯಲ್ಲಿ ಸುತ್ತುತ್ತಾ ಬದುಕಿದ್ದಾರೆ. ಕೇರಿಯ ಬೃಹತ್ ಸಂಖ್ಯೆ ರಾಜಕಾರಣಿಗಳಿಗೆ ಒಂದು ದೊಡ್ಡ ಓಟಿನ ಖಣಜವಾದ್ದರಿಂದ, ಸ್ಥಳೀಯ ರಾಜಕಾರಣಿಗಳು ಈ ಜನರ ಸ್ಥಿತಿಯನ್ನು ಹೀಗೆಯೆ ಉಳಿಸಿಕೊಂಡು, ಇಲ್ಲಿ ಯಾವ ಅಭಿವೃದ್ಧಿ ಕಾರ್ಯ ಕ್ರಮಗಳೂ ಶಿಕ್ಷಣ ಸಂಸ್ಥೆಗಳೂ ಬುದ್ಧಿಜೀವಿಗಳ ಸಂಘಟನೆಗಳೂ ಬೆಳೆಯದಂತೆ ಕೆಲ ಸ್ವಾರ್ಥಿ ಮೂರ್ಖ ಜಾತಿ ನಾಯಕರನ್ನು ಸೃಷ್ಟಿಸಿ ಸಾಕಿಕೊಂಡು ಗೂಂಡಾಗಿರಿ ನಡೆಸಿಕೊಂಡು ಬಂದಿದ್ದಾರೆ. ಕೇರಿಗೆ ಯಾವುದಾದರೂ ಸುಧಾರಣೆ ಸಂಘಟನೆ ಕಾಲಿಟ್ಟರೆ ಮುಗ್ಧ ಜನಕ್ಕೆ ಮೂರ್ಖ ಜಾತಿ ನಾಯಕರೂ ಮರಿ ಪುಡಾರಿಗಳೂ "ಇವರು ವಿರೋದ ಪಕ್ಷದವರು ಹೊಡೆದೋಡಿಸಿರೋ" ಎಂದು ಗಲಾಟೆ ಎಬ್ಬಿಸಿಕೊಂಡು ಈ ಬಹು ಸಂಖ್ಯೆಯ ದಲಿತರನ್ನು ಹಿಡಿತದಲ್ಲಿಟ್ಟು ಕೊಂಡಿದ್ದರು. ಈ ಉಸಿರು ಕಟ್ಟಿಸುವ ಗುಲಾಮೀಯ ಪರಿಸರದೊಳಗೆ ದುಡಿವ ಜನರ ಒಡಲ ಕುಡಿಗಳಾದ ವಿದ್ಯಾವಂತ–ವಿಚಾರವಂತ–ಯುವಜನರು ಸಿಡಿಲ ಕಿಡಿಗಳಾಗಿ ಸಿಡಿದು ದಲಿತ ಸಂಘರ್ಷ ಸಮಿತಿ ಸೇರಿ ಸಂಘಟಿತರಾಗಿ, ಕೇರಿಯ ಮೂರ್ಖ ಜಾತಿ ನಾಯಕರಿಗೆ ಸ್ಥಳೀಯ ರಾಜಕಾರಣಿಗಳಿಗೆ ಇದೀಗ ಸಿಂಹ ಸ್ವಪ್ನವಾಗಿದ್ದಾರೆ.

ಕೇರಿಯಲ್ಲಿ ಆಗಿಂದಾಗ್ಗೆ ಏರ್ಪಡಿಸುವ ದ.ಸಂ. ಸಮಿತಿಯ ಪ್ರಗತಿಪರ ಕಾರ್ಯಕ್ರಮಗಳಿಂದಾಗಿ ಜಾಗೃತಗೊಂಡ ಕೇರಿಯ ಬೃಹತ್ ದಲಿತ ಸಮೂಹ ತಾವಿರುವ ಪರಿಸರ ಸ್ಥಿತಿ–ಗತಿಗಳು ಮತ್ತು ಅದಕ್ಕೆ ಕಾರಣರಾದ ಸ್ವಾರ್ಥಿಗಳು ಎಲ್ಲವನ್ನೂ ಅರ್ಥಮಾಡಿಕೊಂಡು, ಈಗ ಸ್ವತಂತ್ರವಾಗಿ ಯೋಚಿಸುವಂತಾಗಿದ್ದಾರೆ.

6000ಕ್ಕೂ ಮೇಲ್ಪಟ್ಟು ದಲಿತರು ಒಂದೇಕಡೆ ವಾಸವಾಗಿರುವ ಈ ಕೇರಿಗೆ ಮೊದಲಿನಿಂದಲೂ ಕನಿಷ್ಠ ನಾಗರೀಕ ಸೌಲಭ್ಯಗಳಿಲ್ಲದೆ, ಮಹಿಳೆ ಮಕ್ಕಳಾದಿಯಾಗಿ ಎಲ್ಲರೂ ಕೇರಿಯ ರಸ್ತೆಗಳ ಇಕ್ಕೆಲಗಳಲ್ಲಿಯೆ ಮಲಮೂತ್ರ ವಿಸರ್ಜಿಸುವುದರಿಂದ ಹೇಲು ಉಚ್ಚೆಗಳ ನಡುವೆ ಕೊಳಚೆ ಪ್ರದೇಶದ ಜನರೆನಿಸಿಕೊಂಡು ಬದುಕಿದ್ದಾರೆ. ತಮ್ಮ ಸ್ಥಿತಿಗೆ ಕಾರಣರಾದ ಜಾತಿ ನಾಯಕ ಮುದಿ ಪುಡಾರಿ, ಸ್ಥಳೀಯ ರಾಜಕಾರಣಿಗಳ ಮತ್ತು ಅಧಿಕಾರಿಗಳ ವಿರುದ್ಧ ಹಲ್ಲು ಮಸೆಯುತ್ತ ರೊಚ್ಚಿಗೆದ್ದಿದ್ದಾರೆ. ಇದನ್ನು ಕಂಡು ಕಾಲೋನಿಯೊಳಕ್ಕೆ ಕಾಲಿಡಲು ರಾಜಕಾರಿಣಿಗಳು ಅಧಿಕಾರಿಗಳು ನೈತಿಕ ಧೈರ್ಯ, ಮಾನ ಮರ್ಯಾದೆ ಏನೂ ಇಲ್ಲದೆ ಹೆದರಿ ನಡುಗುತ್ತಾರೆ.

ಬಾಯಿಯಲ್ಲಿ ಮಾತ್ರ ಹಿಂದುಗಳೆಲ್ಲಾ ಒಂದೇ ಎಂಬ ತಾಯಿಗಂಡ ಹಿಂದೂ ಗುರು ಮಠಾಧಿಪತಿಗಳ ಕುತಂತ್ರ, ಆಂತರಿಕ ಅಸ್ಪೃಶ್ಯತೆ ಜಾತೀಯತೆ ಆಚರಣೆ ಕಂಡು ಅವರು ನಡೆಸಿದ ಹಿಂದೂ ಸಮಾಜೋತ್ಸವಕ್ಕೆ ಬಹಿಷ್ಕಾರ ಹಾಕಿ ಬಾವುಟ ಸುಟ್ಟು ಜಾತಿವಾದಿಗಳಿಗೆ ಕೇರಿ ಪ್ರವೇಶಿಸದಂತೆ ಹಿಮ್ಮೆಟ್ಟಿಸಿ ಬೆದರಿಸಿ ಕಳುಹಿಸಿದ್ದಾರೆ. ಲಿಂಗಪೂಜೆ, ಸತ್ಯನಾರಾಯಣವ್ರತ ಇತ್ಯಾದಿ ಮಾಡಲು ಕೇರಿಗೆ ಬರಲು ಕಾತರರಾಗಿದ್ದ ಹಿಂದೂ ಪ್ರಬುತಿಗಳು ಎಚ್ಚೆತ್ತ ದಲಿತರ ಕಂಡು ಕಚ್ಚೆಯಲ್ಲಿ ಉಚ್ಚೆ ಹುಯ್ದುಕೊಂಡು ಕೇರಿಗೆ ಕಾಲಿಡಲು ಹೆದರಿ ಕಂಗಾಲಾಗಿದ್ದಾರೆ. ಅವರ ಯಾವ ತಂತ್ರವೂ ಇದುವರೆವಿಗೂ ಫಲಿಸಿಲ್ಲ.

ಹೊಲೆ ಮಾದಿಗರ ಕೇರಿಯಿರುವಲ್ಲಿ ಹೆಂಡದಂಗಡಿ ಇರಲೇಬೇಕೆಂಬ ಪುಡಾರಿ ಸವರ್ಣೀಯ ರಾಜಕಾರಣಿಗಳ ಧೋರಣೆಗೆ ಛೀಕಾರ ಹಾಕಿ ತಮ್ಮ ಆರ್ಥಿಕ ಸಾಮಾಜಿಕ ಅವನತಿಗೆ ಕಾರಣವಾದ ಹೆಂಡ ಸಾರಾಯಿ ಅಂಗಡಿಯನ್ನು ಉಪವಾಸ ಸತ್ಯಾಗ್ರಹ ಹೂಡಿ ಕೇರಿಯಿಂದ ಮೈಲಿ ದೂರ ಹೊರಹಾಕಿದ್ದಾರೆ. ಬೇಡ ಬೇಡವೆಂದರೂ ಬಲವಂತವಾಗಿ ಕೇರಿಗೆಳಲ್ಲಿ ಹೆಂಡದಂಗಡಿ ಮಂಜೂರು ಮಾಡುವ ಸರ್ಕಾರದ ನಿಲುವನ್ನು ತೀವ್ರವಾಗಿ ಖಂಡಿಸಿ

ಸುಮಾರು 30 ವರ್ಷಗಳಿಂದಲೂ ಈಡೇರದೆ ಉಳಿದಿರುವ ಕೇರಿಯ ಜನರ ಬೇಡಿಕೆ ಬಡವರ ಮಕ್ಕಳ ಶಿಕ್ಷಣಕ್ಕೆ ಸ. ನಂ. 334/1 ರಲ್ಲಿ ಶಾಲೆ ನಿವೇಶನಕ್ಕಾಗಿ ದ.ಸಂ.ಸ. ಜೊತೆಗೂಡಿ ಹೋರಾಟ ನಡೆಸುತ್ತಿದ್ದಾರೆ. ಈ ಬೃಹತ್‌ಕೇರಿಯ ಬಡವರ ಮಕ್ಕಳಿಗೆ ಒಂದು ಸ್ವಂತ ಪ್ರೈಮರಿ ಶಾಲೆಕಟ್ಟಡವಿಲ್ಲ. ದಾನಿಗಳು ಕಟ್ಟಿಸಿಕೊಟ್ಟ ಕಮ್ಯುನಿಟಿ ಸೆಂಟರಿನ ಒಂದು ಕೋಣೆಯಲ್ಲಿ ನಾಲ್ಕು ತರಗತಿಗಳೂ ನೆಪಮಾತ್ರಕ್ಕೆ ನಡೆಯುತ್ತಿವೆ. 35 ವರ್ಷಗಳಿಂದಲೂ ಇದೇ ಸ್ಥಿತಿ.

ಕೇರಿಯ ಜನರ ಈ ಬದಲಾವಣೆ ಗಮನಿಸಿದ ಬಡವರ ಹೆಸರಿನಲ್ಲಿ ರಾಜಕೀಯ ಮಾಡಿಕೊಂಡು ಶ್ರೀಮಂತ ಜೀವನ ನಡೆಸುವ ಮೋಸಗಾರ ಪುಡಾರಿಗಳು, ಜಾತಿ ನಾಯಕರು ಬೆಚ್ಚಿ ದಂಗಾಗಿದ್ದಾರೆ. ಇದಕ್ಕೆ ಕಾರಣವಾದ ದ. ಸಂ. ಸ. ಕಾರ್ಯಕರ್ತರನ್ನು, ಕಾಲೋನಿಯ ಪುಡಾರಿಯೊಬ್ಬ ಹರಿಜನರ ಹೆಸರಿನಲ್ಲಿ ಹೆಂಡತಿ ಮಕ್ಕಳೆಲ್ಲರ ಹೆಸರಿಗೆ ಹರಿಜನರಿಗೆಂದು ಮಂಜೂರಾಗುವ ಉಚಿತ ಮನೆ-ನಿವೇಶನ, ಜಮೀನು–ಗ್ರಾಂಟುಗಳನ್ನೆಲ್ಲಾ ಕಬಳಿಸುತ್ತ ಇದುವರೆವಿಗೂ ಬಡವರ ಹೆಸರಿನಲ್ಲಿ ಬಡವರಿಗೆ ಮೋಸ

## ತುಮಕೂರು ದೊರೆ

ಮಾಡುತ್ತಾ, ಮೂರ್ಖ ಜಾತಿನಾಯಕನಾಗಿ, ದೊಡ್ಡ ರಾಜಕಾರಿಣಿಗಳ ದಳ್ಳಾಳಿಯಾಗಿಜನಗಳನ್ನು ವಂಚಿಸಿಕೊಂಡೆ, ಬೆದರಿಸಿಕೊಂಡೆ ಜೀವನ ಸಾಗಿಸುತ್ತಾ "ನೀವು ಸಂಘ ಸೇರಿದರೆ ಸರ್ಕಾರಿ ಕೆಲಸ ಸಿಗದಂತೆ, ಹಾಲಿ ಕೆಲಸದಲ್ಲಿರುವವರನ್ನು ಕೆಲಸದಿಂದ ವಜಾ ಮಾಡಿಸುವಂತೆ ಪೋಲಿಸ್ ರೀಪೋರ್ಟ್ ಹಾಕಿಸುತ್ತೇನೆ." ಎಂದೆಲ್ಲಾ ಬೆದರಿಕೆ ಹಾಕಿ ದಿನೇ ದಿನೇ ಬಲಗೊಳ್ಳುತ್ತಿರುವ ಸಂಘಟನೆಯ ಶಕ್ತಿಗೆ ಹೆದರಿ ಹೊರಕ್ಕೆ ತಿರುಗಾಡಲೂ ಸಹ ಬರುತ್ತಿಲ್ಲ. ಜನರಿಗೆ ಮೋಸ ಮಾಡಿಕೊಂಡೆ ಬದುಕುವ ಇಂತಹ 420 ಜನಗಳ ರಕ್ಷಣೆ ಮಾಡುವುದಕ್ಕೆ ಮತ್ತು ಪ್ರಾಮಾಣಿಕವಾಗಿ ಬದುಕುವ ಜನರನ್ನು ರಕ್ಷಿಸುವುದಕ್ಕಾಗಿಯೇ ಪೋಲೀಸ್ ವ್ಯವಸ್ಥೆಯಿದೆಯೆಂದು ಈ ಮುಟ್ಠಾಳ ಮೂರ್ಖ ತಿಳಿದುಕೊಂಡಂತಿದೆ. ಸಂಘಟನೆ ಹಾಳುಮಾಡುತ್ತೇನೆಂದು ಪಣತೊಟ್ಟು ಸಂಘದ ಕಾರ್ಯಕರ್ತರ ಮನೆಗಳಿಗೆ ಹೋಗಿ "ಸಂಘ ಸೇರಿಯುವ ಜನರು ಹಾಳಾಗುತ್ತಿದ್ದಾರೆ ಆದ್ದರಿಂದ

# …ಮಕೂರಿನ ಎನ್ನಾರ್ ಕಾಲೋನಿ

## ವಿಶೇಷ ಲೇಖನ

ಅವರಿಗೆ ಮನೆಯಲ್ಲಿ ಊಟ ಹಾಕದೆ ಬುದ್ಧಿ ಕಲಿಸಿ." …ಎಂದು ಅರಿಯದ ಅಪ್ಪ ಅವ್ವಂದಿರಿಗೆ ಕಿವಿ ಊದು …ತ್ತಿರುವ ಈ ಲಫಂಗ ಕೊನೆಗೆ ಊಟ ಬಿಟ್ಟರೂ …ಸಂಘ ಬಿಡುವುದಿಲ್ಲ" ಎಂಬ ಕಾರ್ಯಕರ್ತರ ದಿಟ್ಟ …ನುಡಿ ಕೇಳಿ ಕಂಗೆಟ್ಟು ಹೋಗಿದ್ದಾನೆ.

ದಲಿತರ ಸಂಘಟನೆಯನ್ನು ಮುರಿಯ ಹೋಗಿ …ಹಲ್ಲು ಮುರಿದುಕೊಳ್ಳುತ್ತಿರುವ ಭ್ರಷ್ಟ ವೃತ್ತಿ …ರತ ಜನವಂಚಕ ಜಾತಿ ನಾಯಕರಿಗೆ, ಬಡವರ …ಹೆಸರಿನಲ್ಲಿ ಜೀವನ ಮಾಡುವ ರಾಜಕಾರಣಿಗಳಿಗೆ …ಪಾಠಕಲಿಸುತ್ತಿರುವ ಕೇರಿಯ ದಲಿತರು 'ರಾಜ …ಕಾರಣಿಗಳಿಂದಲೇ ನಮ್ಮ ಉದ್ಧಾರ' ಎಂಬ ಭ್ರಮೆ …ಯಿಂದ ಎಚ್ಚೆತ್ತಿದ್ದಾರೆ. ನಮ್ಮ ಕೇರಿಗೆ ಶಾಲೆ …ಬೇಡ ಹೆಂಡದಂಗಡಿ ಬೇಕು ಎನ್ನುವ ಜಾತಿ …ನಾಯಕ ರಾಜಕಾರಣಿಗಳ ಹೇಳಿಕೆಗಳ ಹಿಂದಿನ …ತಂತ್ರ ಕುಯುಕ್ತಿಯನ್ನು ಅರ್ಥಮಾಡಿಕೊಂಡಿ …ದ್ದಾರೆ. ಈ ಬೃಹತ್ ಸಂಖ್ಯೆಯ ದಲಿತರ ಕೇರಿ …ತೋರಿಸಿ-ಶಾಸಕ-ಮಂತ್ರಿಗಳೂ-ಲಕ್ಷಾದೀಶ್ವರರಾಗಿ …ರುವುದನ್ನು ಕಣ್ಣಾರೆ ಕಂಡಿದ್ದಾರೆ. ಐದು ವರ್ಷ …ಕ್ಕೊಮ್ಮೆ ಬಂದು ಬಡವರ ಉದ್ಧಾರ ಮಾಡ್ತೇವೆ. …ಮನೆಯಿಲ್ಲದವರಿಗೆ ಮನೆ ನಿವೇಶನ-ಬಡವರಿಗೆ …ಸಾಲ-ವಿದ್ಯಾವಂತರಿಗೆ ಕೆಲಸ ಎಂದೆಲ್ಲಾ ಬೊಗಳೆ …ಭಾಷಣ ಮಾಡಿ ಓಟು ಹಾಕಿಸಿಕೊಂಡ ಜನ-ಜನ …ನಾಯಕರುಗಳು ಮಾತ್ರ-ಮನೆ ಬಂಗಲೆಗಳ ಕಟ್ಟಿಸಿ …ಕೊಂಡು, ತಮ್ಮ ಹೆಂಡತಿಮಕ್ಕಳ ಹೆಸರಿನಲ್ಲಿ ಆಸ್ತಿ …ಮಾಡಿಕೊಂಡು-ಸರ್ಕಾರಿ ನೌಕರಿಗಳನ್ನೆಲ್ಲಾ ತನ್ನ …ಸಂಬಂಧಿಕರಿಗೆ ಗಿಟ್ಟಿಸಿಕೊಂಡು ಕಾರಿನಲ್ಲಿ ತಿರುಗಾ …ಡುತ್ತ ಮೆರೆದು ಮುಂದುವರೆಯುತ್ತಿದ್ದಾರೆಯೆ …ನೇ: ಓಟು ಹಾಕಿದ ಬಡವ ಮಾತ್ರ ಮನೆ ನಿವೇ …ಶನ-ಸಾಲ-ಸರ್ಕಾರಿ ಕೆಲಸ ಯಾವೂ ಇಲ್ಲದೆ ನಿರ್ಗ …ತಿಕರಾಗೇ ಉಳಿದಿರುವಂತಹ ಪರಿಸ್ಥಿತಿ ದಲಿತರಿಗೆ …ಚೆನ್ನಾಗಿ ಪಾಠಕಲಿಸಿದೆ. ಬಡವರ ಸಂಘಟಿತ …ಹೋರಾಟ ಜನ ಮೂಲಶಕ್ತಿಯಿಂದ ಮಾತ್ರ ತಮ್ಮ …ಬೇಡಿಕೆಗಳು ಈಡೇರುತ್ತವೆಂದು ಮನಗಂಡ …ರಿಯ ದಲಿತರು, ದ. ಸಂ. ಸ. ಯ ಕಾರ್ಯ …ಕ್ರಮಗಳಲ್ಲಿ ಹಿಂದೆಂದೂ ಕಾಣದಂತಹ ಉತ್ಸಾಹ …ಆಸಕ್ತಿಯಿಂದ ಬಹುಸಂಖ್ಯೆಯಲ್ಲಿ ಭಾಗವಹಿಸಿ …ಸಂಘದ ವಿಷಯಗಳನ್ನು ಆಲಿಸುತ್ತಿದ್ದಾರೆ ಮಾತ್ರ …ಲ್ಲ ಸಂಘವನ್ನು ತಮ್ಮದಾಗಿಸಿಕೊಂಡಿದ್ದಾರೆ. …ಮನೆಯ ಪ್ರತಿಯೊಂದು ಪುಟ್ಟ ಮಗುವಿನ ಬಾಯಿ …ಯಲ್ಲೂ ಹೋರಾಟದ ಹಾಡುಗಳು ಮೊಳಗು …ತ್ತಿವೆ. ಪುಢಾರಿಗಳ ಓಟಿನ ಖಣಜವೀಗ ದಲಿತ ಕ್ರಾಂತಿಯ ಬಲಿಷ್ಠ ಕೇಂದ್ರ ಕೋಟೆಯಾಗಿದೆ.

ದಲಿತರ ಕೇರಿಗೆಂದು ಮುಂಜೂರಾಗುವ ಲಕ್ಷಗಟ್ಟಳೆ ಹಣವನ್ನು ದಲಿತಕೇರಿಗಳ ರಸ್ತೆ-ನಾಗರಿಕ ಸೌಲಭ್ಯಗಳಾದ ಮಲಮೂತ್ರ ವಿಸರ್ಜನೆಗೆ ಶೌಚಗೃಹಗಳನ್ನು ಕಟ್ಟಿಸದೆ ಇಷ್ಟು ವರ್ಷಗಳ ಕಾಲವೂ ನಗರ ಸಭೆಯ ಅಧಿಕಾರಿಗಳು ದಲಿತರ ಹಣವನ್ನು ದುರುಪಯೋಗ ಪಡಿಸಿಕೊಂಡು ನುಂಗಿ ಹಾಕುತ್ತ ದಲಿತರ ಹೇಲು ತಿನ್ನುವ ಹಂದಿಗಳಾಗಿ ಕೊಬ್ಬಿದ್ದಾರೆ. ಕನಿಷ್ಠ ನಾಗರಿಕ ಸೌಲಭ್ಯಕ್ಕಾಗಿ ಕೇರಿಯ ದಲಿತರು ಕೂಗಿಕೊಳ್ಳುತ್ತಿದ್ದರೂ. ಕಿವಿ ಕೇಳಿಸದಂತಿದ್ದಾರೆ. ಸ್ಥಳೀಯ ಶಾಸಕರು ಅವರ ಗಲ್ಲಿಗಳಿಗೆಲ್ಲಾ ಟಾರು ರಸ್ತೆ ಮಾಡಿಸಿಕೊಂಡು ಅವರಿಗೆ ದೊರಕಬಹುದಾದ ಎಲ್ಲಾ ಸೌಲಭ್ಯಗಳನ್ನು ಚಾಚೂ ತಪ್ಪದೆ ಒದಗಿಸುತ್ತ ಅವರಿಗೆ ಓಟು ಹಾಕಿದ ದಲಿತರ ಕಡೆ ಗಮನವಿಲ್ಲ. ಅವರ ಜನರ ಗಲ್ಲಿಗಳೂ ಮತ್ತು ಈ ಕಾಲೋನಿಯ ಗಲ್ಲಿಗಳ ರಸ್ತೆ-ನೈರ್ಮಲ್ಯ-ನಾಗರಿಕ ಸೌಲಭ್ಯಗಳ ವ್ಯವಸ್ಥೆಯನ್ನು ನೋಡಿದ ಯಾರಿಗಾದರೂ ವ್ಯತ್ಯಾಸ ಎದ್ದು ಕಾಣುತ್ತದೆ ಮಾತ್ರವಲ್ಲ ಶಾಸಕರ ಪಕ್ಷಪಾತವನ್ನು ಕೂಗಿ ಹೇಳುತ್ತಿವೆ. ಆದ್ದರಿಂದ ಶಾಸಕರು ತಮ್ಮನ್ನು ಓಟುಕೊಟ್ಟು ಆಯ್ಕೆ ಮಾಡಿದವರು ಬರಿ ಸ್ವಂತ ಜಾತಿ ಜನರೇ ಅಲ್ಲ ಅಧರಲ್ಲಿ ಹೆಚ್ಚಿನ ಮಂದಿ ದಲಿತರೂ ಓಟು ಹಾಕಿದ್ದಾರೆ ಎಂಬುದನ್ನು ಮರೆತಂತಿದೆ. ಇದು ದಲಿತರಿಗೆಸಗಿದ ಘೋರ ಅಪರಾಧ ಮತ್ತು ದ್ರೋಹವೆಂಬುದನ್ನು ಮನಗಂಡು ಶಾಸಕರು ಬೇಗನೆ ತಪ್ಪನ್ನು ತಿದ್ದಿಕೊಂಡರೆ ಒಳ್ಳೆಯದು.

ವೇದಿಕೆಯ ಮೇಲೆ ಮಾತ್ರ "ನಾನೂ ಒಬ್ಬ ಅಸ್ಪೃಶ್ಯರ ಕಷ್ಟದ ಜೀವನದ ಅನುಭವವಿದೆ. ಅಸ್ಪೃಶ್ಯರು ಮೊದಲು ವಿದ್ಯಾವಂತರಾಗಬೇಕು-ಎಚ್ಚೆತ್ತು ಸಂಘಟಿತರಾಗಿ ತಮ್ಮ ಹಕ್ಕುಗಳಿಗಾಗಿ ಹೋರಾಡಬೇಕು." ಎಂದು ಉದ್ಗರಿಸುವ ಮಾನ್ಯ ಜಿಲ್ಲಾಧಿಕಾರಿಗಳು ದಲಿತರ ಅತಿ ಮುಖ್ಯ ಬಹುದಿನಗಳ ಬೇಡಿಕೆಯಾದ ಸ. ನಂ. 334/1 ರಲ್ಲಿ ಶಾಲೆ ನಿವೇಶನ ಮತ್ತು ಕನಿಷ್ಠ ನಾಗರಿಕ ಸೌಲಭ್ಯಗಳ ಕಡೆ, ದಲಿತರು 30 ವರ್ಷಗಳಿಂದಲೂ ಮುಗಿಲೆತ್ತರಕ್ಕೊ ದ್ವನಿ ಏರಿಸಿ ಕೂಗಿ ಕೇಳಿಕೊಳ್ಳುತ್ತಿದ್ದರೂ ಕಿವುಡರಾಗಿ, ಶ್ರೀಮಂತರ ಕೈ ಪಂಜರದ ಬಿಳಿ ಇಲಿಯಾಗಿ, ದಲಿತರಿಗೆ ಶಾಲೆ ಕೊಡಬಾರದು, ದಲಿತರು ವಿದ್ಯಾವಂತರಾಗಲು ಬಿಡಬಾರದು, ಬರೀ ಹೆಂಡದಂಗಡಿ ಮಾತ್ರ ಕೇಳದಿದ್ದರೂ ಬಲವಂತವಾಗಿಯಾದರೂ ಕೊಡಬೇಕು ಎನ್ನುವ ಅಪಮಾನವೀಯ ಧೋರಣೆಯ ಸ್ವಾರ್ಥಿ ರಾಜಕಾರಣಿಗಳ ಕೈಯಲ್ಲಿ ಬಣ್ಣದ ಬೀಸಣಿಗೆಯಾಗಿ, ತಿರುಗುತ್ತಿದ್ದಾರೆ.

ದಲಿತರ ಕೇರಿಗಳಲ್ಲಿ ಶಾಲೆಕಟ್ಟುವುದಕ್ಕಿಂತ ಮಂತ್ರಿಗಳನ್ನು ಕರೆಸಿ ಕಲ್ಯಾಣ ಮಂದಿರಗಳನ್ನು ಕಟ್ಟುವುದರಲ್ಲಿ ಮುಂದಾಗಿದ್ದಾರೆ. ದಾರಿದ್ರ್ಯ, ಜಾತೀಯತೆಯ ನೋವು ಅವಮಾನಗಳನ್ನುಂಡು ಬಡವರ ಬೇಡಿಕೆಗಳ ಬಗ್ಗೆ ಗಮನ ಹರಿಸದ ಜಿಲ್ಲಾಧಿಕಾರಿಗಳು ವರ್ಷ ವರ್ಷ ಸಾವಿರಾರು ಮಂದಿ ಬಡವರ ಮಕ್ಕಳು ಶಾಲೆ ಶಿಕ್ಷಣದಿಂದ ವಂಚಿತರಾಗಿ ತುಳಿಸಿಕೊಳ್ಳುವವರ ಪೀಳಿಗೆಯನ್ನು ಹೆಚ್ಚಿಸಿಕೊಂಡು ಮುಂದುವರೆಸಿಕೊಂಡು ಹೋಗುವಂತಹ ಅಮಾನವೀಯ ಯಜ್ಞಕ್ಕೆ ಪೌರೋಹಿತ್ಯ ವಹಿಸುತ್ತಿದ್ದಾರೆ ಅವರ ಈ ಧೋರಣೆ ಬದಲಾಗದಿದ್ದರೆ, ಸ್ಥಳೀಯ ರಾಜಕಾರಣಿಗಳ ಮತ್ತು ಅಧಿಕಾರಿಗಳ ಹೇಳಿಕೆಗಳು ಕೆಲಸಗಳನ್ನೆಲ್ಲಾ ಮೈಯೆಲ್ಲಾ ಕಣ್ಣಾಗಿ ಹೊಟ್ಟೆಯಲ್ಲಿ ಬೆಂಕಿ ತುಂಬಿಕೊಂಡು ತಾಳ್ಮೆ-ಕಾತುರದಿಂದ ಗಮನಿಸುತ್ತಿರುವ ದಲಿತರು ತೀವ್ರ ಹೋರಾಟಕ್ಕಿಳಿದು "ಬಡವರ ರೊಚ್ಚಿಗೆದ್ದರೆ ಬಡವರ ವಿರೋಧಿ ಅಧಿಕಾರಶಾಹಿ ನುಚ್ಚು ನೂರು" ಎಂಬ ಹೋರಾಟಕ್ಕೆ ಅವಕಾಶ ಮಾಡಿ ಕೊಟ್ಟಂತಾಗುತ್ತದೆ"

---

### ಕೊಲೆಗಡುಕ ಜಗತ್ತಿನಲ್ಲಿ

ಎಷ್ಟೇ ಪ್ರಖರನಾಗಿರಲಿ
ಸೂರ್ಯ ಆಕಾಶದಲ್ಲಿ
ಖಡ್ಗಕ್ಕೆ ತಗಲುವ ರಕ್ತ
ಒಣಗಿ ಹೋಗದು ಇಲ್ಲಿ.

—ರಸೂಲ್ ಗಮ್ಜತೋವ್
(ರಶಿಯಾ ದೇಶದ ಕವಿ)

### ವೈರಿ

ತಿಳಿಯದಾಗ
ಹೋರಾಟದ ದಾರಿ :
ಬಂದೂಕು
ಹಿಡಿಯುವನು ವೈರಿ.
ಮುಂದೆ
ಹೇಳುವನು :
'ಅಸ್ತಿ ಪಂಜರಗಳೆಲ್ಲ
ನಮ್ಮ ಗುಲಾಮರದು'
ಎಂದು.

—ಲೆಯೆನ್ ಬೆಯೆನ್
(ಚೀನದ ಕವಿ)

# ಭೂ ಕಾನೂನಿನ ಗೊಂದಲಗಳಲ್ಲಿ ಬಡ ರೈತರ ನಾ

ಕರ್ನಾಟಕದಲ್ಲಿ ವಿವಿಧ ರೀತಿಯ ಭೂ ಸಂಬಂಧಗಳು ಜಟಿಲವಾದ ಹಲವಾರು ಸಮಸ್ಯೆಗಳೊಂದಿಗೆ ವಿಷವರ್ತುಲದಲ್ಲಿ ಹೆಣೆದುಕೊಂಡಿವೆ. ಒಂದು ಜಿಲ್ಲೆಗೂ ಇನ್ನೊಂದಕ್ಕೂ ಜಿಲ್ಲೆಯೊಳಗೇ ಬೇರೆ ಬೇರೆ ಭೂಮಿಗೂ ಹಲವಾರು ರೀತಿಯ ವ್ಯತ್ಯಾಸಗಳಿವೆ. ಅಲ್ಲದೆ ಭಾಷಾವಾರು ದೃಷ್ಟಿಯಿಂದ 1956 ರಲ್ಲಿ ಕನ್ನಡ ಮಾತಾಡುವ ಜನರ ಭೂಮಿಯನ್ನೆಲ್ಲ ಒಟ್ಟುಗೂಡಿಸಿ ವಿಶಾಲ ಕರ್ನಾಟಕವನ್ನು ಸ್ಥಾಪಿಸಲಾಯಿತು. 9 ಜಿಲ್ಲೆಗಳಿಂದ ಕೂಡಿದ್ದ ಹಳೆಯ ಮೈಸೂರಿಗೆ ಅನ್ವಯವಾಗುವ ಕಾನೂನುಗಳನ್ನೇ ಹೊಸದಾಗಿ ಸೇರಿದ ಹತ್ತು ಜಿಲ್ಲೆಗಳಿಗೂ ಅನ್ವಯಿಸಲಾಯಿತು. ಇಲ್ಲಿ ಇದ್ದಂಥ ಭೂ ಒಡೆತನ ಮತ್ತು ಗೇಣಿ ಪದ್ಧತಿ ವಿಭಿನ್ನವಾಗಿದ್ದಾಗ ಏಕರೂಪತೆಯ ಕಾನೂನು ತಂದದ್ದು ಹಲವಾರು ರೀತಿಯ ಗೊಂದಲಗಳಿಗೆ ಎಡೆಮಾಡಿಕೊಟ್ಟಿತು.

1953ರಲ್ಲೇ ಮದ್ರಾಸ್ ರಾಜ್ಯಕ್ಕೆ ಸೇರಿದ್ದ ಬಳ್ಳಾರಿಯನ್ನು ಮೈಸೂರು ರಾಜ್ಯಕ್ಕೆ ಸೇರಿಸಲಾಗಿತ್ತು. ನಂತರ 1956 ರಲ್ಲಿ ದಕ್ಷಿಣ ಕನ್ನಡ ಮತ್ತು ಕೊಳ್ಳೇಗಾಲ ತಾಲ್ಲೂಕನ್ನು ಮದ್ರಾಸ್ ರಾಜ್ಯದಿಂದ ಮೈಸೂರಿಗೆ ಸೇರಿಸಲಾಯಿತು. ಹೀಗೆ ಸೇರಿಸಿಕೊಳ್ಳುವುದಕ್ಕೆ ಮುಂಚೆ ಈ ನಾಡಿನಲ್ಲಿ 1955 ರಲ್ಲಿ 'ಗೇಣಿ ರಕ್ಷಣೆಯ ಕಾನೂನು' ಪ್ರಚಲಿತವಾಗಿದ್ದು ಯಾವುದೇ ಗೇಣಿದಾರನನ್ನೂ ಒಕ್ಕಲೆಬ್ಬಿಸುವ ಹಕ್ಕಿರಲಿಲ್ಲ (ಗೇಣಿದಾರ ಭೂಮಾಲಿಕನಿಗೆ ಒಪ್ಪಿಕೊಂಡಷ್ಟನ್ನು ಕೊಡದಿದ್ದಾಗ ಮಾತ್ರ ಒಕ್ಕಲೆಬ್ಬಿಸಬಹುದಾಗಿತ್ತು). ಕರ್ನಾಟಕಕ್ಕೆ ಈ ಜಿಲ್ಲೆಗಳು ಸೇರಿಕೊಂಡಾಗ ಅಲ್ಲಿ ನೆಲೆಯಾಗಿದ್ದ ಗೇಣಿದಾರನಿಗೆ ಇಂಥ ರಕ್ಷಣೆ ಸಿಕ್ಕದೆ ಒಕ್ಕಲೆಬ್ಬಿಸುವಿಕೆಗೆ ಗುರಿಯಾಗಬೇಕಾಯಿತು. ಭಾಷಾ ದೃಷ್ಟಿಯಿಂದ ಕನ್ನಡ ನಾಡಿಗೆ ಸೇರಿದ ಕನ್ನಡ ಗೇಣಿದಾರ ಜೀವನಕ್ಕೆ ಆಸರೆಯಾಗಿದ್ದ ಭೂಮಿಯನ್ನು ಕಳೆದುಕೊಂಡು ವಂಚಿತನಾಗುತ್ತೇನೆ ಅನ್ನುವ ಕನಸು ಕಂಡಿರಲಿಲ್ಲ ಅಂತಕಾಣುತ್ತದೆ.

ಹಿಂದೆ ಮದ್ರಾಸ್ ಪ್ರಾಂತ್ಯಕ್ಕೆ ಸೇರಿದ್ದ ದಕ್ಷಿಣ ಕನ್ನಡ ಜಿಲ್ಲೆ ಹಿಂದಿನ ಕಾನೂನುಗಳನ್ನೇ ಮೈಗೂಡಿಸಿಕೊಂಡಿದ್ದರಿಂದ ಕರ್ನಾಟಕದಲ್ಲಿ ಜಾರಿಯಾದ 1964ಮತ್ತು1974ರ ಭೂಕಂದಾಯ ಶಾಸನಗಳು ಎಷ್ಟೊಂದು ಸಮಸ್ಯೆಗಳನ್ನು ಹುಟ್ಟಿಸಿವೆ ಅನ್ನುವುದಕ್ಕೆ ಈಗಲೂ ಅಲ್ಲಿ ಜೀವಂತವಾಗಿರುವ ಅನೇಕ ಜಟಿಲ ಸಮಸ್ಯೆಗಳನ್ನು ಕಣ್ಣಾರೆ ಕಾಣಬಹುದು. ಇಂತಹ ಸಮಸ್ಯೆಗೆ ಒಂದು ಉದಾಹರಣೆ :

ಮದ್ರಾಸ್ ಪ್ರಾಂತ್ಯಕ್ಕೆ ಸೇರಿದ್ದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ರೂಢಿಯಲ್ಲಿದ್ದ ಭೂ ಕಂದಾಯ ವ್ಯವಸ್ಥೆ ಹೀಗಿತ್ತು–ವ್ಯವಸಾಯದ, ವ್ಯವಸಾಯಕ್ಕೆ ಯೋಗ್ಯವಲ್ಲದ ಎಲ್ಲ ಭೂಮಿಯನ್ನು ಸರ್ವೆನಂಬರುಗಳ ಮೂಲಕ ಗುರುತಿಸಿ ಕಂದಾಯವಸೂಲಿ ಮಾಡುತ್ತಿದ್ದರು. ಅಂದರೆ ಇಲ್ಲಿ ಕಂದಾಯ ಮಾಡುವುದಕ್ಕಾಗಿ ಮಾತ್ರ ಸರ್ವೆನಂಬರ್ ಕೊಡುತ್ತಿದ್ದರೇ ಹೊರತು ವ್ಯವಸಾಯದ ಭೂಮಿ ಅನ್ನುವ ದೃಷ್ಟಿಯಿಂದಲ್ಲ. ಇಲ್ಲಿ ಸರ್ವೆ ನಂಬರ್ ಹೊಂದಿದ

## ಭೂ ಸುಧಾರಣಾ ಚರಿತ್ರೆ–2

ಜಮೀನು ಸಂಪೂರ್ಣವಾಗಿ ಬಂಡೆಕಲ್ಲಿನ ಜಾಗವಾಗಿರುವ ಸಾಧ್ಯತೆಯೂ ಇದೆ. ಆದರೆ ಮೈಸೂರು ಸಂಸ್ಥಾನದಲ್ಲಿ ವ್ಯವಸಾಯಕ್ಕೆ ಯೋಗ್ಯವಾದ ಜಮೀನನ್ನು plot ಗಳಾಗಿ ಗುರ್ತಿಸುತ್ತಿದ್ದರು.

### ಪರಿವರ್ತನಾ ಭೂತ

ವಿಭಿನ್ನ ರೀತಿಯ ಮಾನದಂಡಗಳಿದ್ದಾಗ 1964 ರಲ್ಲಿ ಜಾರಿಗೆ ಬಂದ ಕಾನೂನು ಇದಕ್ಕೆ ಜಟಿಲ ರೂಪ ಕೊಟ್ಟಿತು. 1–4–1964 ರಂದು ಜಾರಿಗೆ ಬಂದ ಕರ್ನಾಟಕ ಭೂ ಕಂದಾಯ ಶಾಸನದ 95 ನೇ ವಿಧಿಯ ಪ್ರಕಾರ "ಭೂ ಕಂದಾಯಕ್ಕಾಗಿ ಅಸೆಸ್ ಆಗಿರುವ ಜಮೀನನ್ನು ಇನ್ನಾವ ಉದ್ದೇಶಕ್ಕೂ ಬಳಸಿಕೊಳ್ಳಬಾರದು. ಹಾಗೆ ಬಳಸಿಕೊಳ್ಳುವುದಾದರೆ ಡೆಪ್ಯುಟಿ ಕಮಿಷನರ್ ರವರಿಂದ ಅನುಮತಿ ಪಡೆಯಲು ಪರಿವರ್ತನಾ ದಂಡವನ್ನು ತೆರಬೇಕು". ದುರಂತವೆಂದರೆ ಹಿಂದೆ ಮದ್ರಾಸ್ ಪ್ರಾಂತ್ಯಕ್ಕೆ ಸೇರಿದ್ದು ಈಗ ಕರ್ನಾಟಕದಲ್ಲಿರುವ ದಕ್ಷಿಣ ಕನ್ನಡದ ಎಲ್ಲ ಭೂಮಿಯೂ ಪ್ರತಿಯೊಂದು ಅಂಗುಲವೂ ಸರ್ವೆನಂಬರ್‌ಗಳನ್ನು ಹೊಂದಿರುವುದರಿಂದ ಎಲ್ಲ ಭೂಮಿಯೂ ವ್ಯವಸಾಯ ಯೋಗ್ಯ ಅಂತ ಗಣಿಸಲ್ಪಟ್ಟು ಯಾವುದೇ ಭೂಮಿಯನ್ನು ಇತರ ಉದ್ದೇಶಗಳಿಗೆ ಬಳಸಿಕೊಳ್ಳುವುದಕ್ಕೂ ಕಾನೂನಿನ ತಡೆ ಇದೆ.

ಒಂದು ಉದಾಹರಣೆ ನೋಡಿ. ರಸ್ತೆ ಸಾರಿಗೆ ಸಂಸ್ಥೆಯೊಂದು ವಿಶಾಲವಾದ ಜಮೀನನ್ನು ಹೊಂದಿತ್ತು. ಅದನ್ನು ತನ್ನ ಬಸ್ಸುಗಳ ನಿಲ್ದಾಣವನ್ನಾಗಿ ಬಳಸಿಕೊಂಡಿತ್ತು. ಅದೇ ಜಮೀನಿನ ಒಂದು ಭಾಗದಲ್ಲಿ ಕಟ್ಟಡವೊಂದನ್ನು ಕಟ್ಟಲೆಂದು ಅದರ ಪರಿವರ್ತನೆಗಾಗಿ ಸಾರಿಗೆ ಸಂಸ್ಥೆಯು ಅರ್ಜಿ ಸಲ್ಲಿಸಿದಾಗ ಸರ್ಕಾರದಿಂದ ಪಡೆದ ಉತ್ತರವಿದು. "ನೀವು ಜಮೀನಿನ ಪರಿವರ್ತನೆಯನ್ನು ಬಯಸಿರುವುದರಿಂದ ಅದು ಬೇಸಾಯದ ಭೂಮಿ ಎಂದು ನೀವೇ ಒಪ್ಪಿಕೊಂಡಂತಾಯಿತು. ಆದರೆ ಭೂ ಸುಧಾರಣಾ ಶಾಸನದ 79 ನೇ ವಿಧಿಯ ಪ್ರಕಾರ ಕಂಪೆನಿಗಳು ಬೇಸಾಯದ ಭೂಮಿಯನ್ನು ಹೊಂದಿರುವಂತಿಲ್ಲ. ಹಾಗಾಗಿ ಸದರಿ ಭೂಮಿಯನ್ನು ಸರ್ಕಾರದ ವಶಕ್ಕೆ ಒಪ್ಪಿಸತಕ್ಕದ್ದು"

ಹೀಗೆ ಜಾರಿಯಾಗುತ್ತಿರುವ ಕಾನೂನುಗಳು ಎಲ್ಲರ ದೃಷ್ಟಿಯಿಂದಲೂ ಬೀಸುಗತ್ತಿಗಳಾಗಿರುವುದರಿಂದ ಯಾವಾಗ ಯಾರ ಕತ್ತನ್ನು ಬೇಕಾದರೂ ಕತ್ತರಿಸಿ ಹಾಕಬಹುದು ಅನ್ನುವ ಭೀತಿ ಬೇರೂರಿದೆ.

೧೯೫೬ ಕ್ಕೆ ಹಿಂದೆ ಕೊಡಗು ಒಂದು ಸ್ವತಂತ್ರ ಪ್ರಾಂತ್ಯವಾಗಿತ್ತು. ಇಲ್ಲಿ ಇದ್ದಂಥ ಭೂ ಸಂಬಂಧಗಳು ಕರ್ನಾಟಕಕ್ಕಿಂತ ತೀರ ವಿಭಿನ್ನವಾದವು.

೧. 'ಜನ್ಮ ಬೇಸಾಯದ ಭೂಮಿ' ಯನ್ನು ಶ್ರೀಮಂತರು ತಮ್ಮ ವಶದಲ್ಲಿಟ್ಟುಕೊಂಡು ಭೂಮಿತಿಯ ಕಾನೂನಿಗೆ ಒಳಪಡದೆ ನೂರಾರು ಎಕರೆ ಭೂಮಿಯ ಒಡೆಯರಾಗಿದ್ದರು. ಆದರೆ ಈ ಭೂಮಿಯನ್ನು ಮಾರುವ ಅಥವಾ ಅಡವಿಡುವ ಹಕ್ಕು ಇವರಿಗಿರಲಿಲ್ಲ.

೨. 'ಸಾಗು ಭೂಮಿ' ಯ ರೈತ ತಾನು ವ್ಯವಸಾಯ ಮಾಡದೆ ಇರುವ ವರ್ಷ ಕಂದಾಯವನ್ನು ಕೊಡಬೇಕಾಗಿರಲಿಲ್ಲ. ಅವನಿಗೆ ಈ ಭೂಮಿಯ ಒಡೆತನದ ಹಕ್ಕಿಲ್ಲದಿದ್ದರೂ ಬೇರೆಯವರಿಗೆ ವರ್ಗಾಯಿಸಬಹುದಾಗಿತ್ತು.

೩. 'ಉಂಬಳಿ ಭೂಮಿ' ಯ ರೈತ ಯಾವುದೇ ಕಂದಾಯವನ್ನೂ ಕಟ್ಟಬೇಕಾಗಿರಲಿಲ್ಲ.

ಇಂಥ ಭೂ ಸಂಬಂಧಗಳಲ್ಲಿ ಯಾವುದೇ ಗೇಣಿಯ ಕಾನೂನುಗಳಾಗಲಿ ಗೇಣಿದಾರರನ್ನು ಗುರುತಿಸುವುದಾಗಲಿ ಇರಲೇ ಇಲ್ಲ. ಇಲ್ಲಿ ಗೇಣಿಯ ಕಾನೂನುಗಳು ಶೂನ್ಯವಾಗಿದ್ದವು. ಇಂತ ಸನ್ನಿವೇಶಗಳಲ್ಲಿ ಗೇಣಿದಾರರ ರಕ್ಷಣೆಯ ಕಾನೂನುಗಳು ಇಲ್ಲಿ ಅನ್ವಯಿಸುವುದೇ ಇಲ್ಲ.

ಹೈದ್ರಾಬಾದ್‌ಗೆ ಮತ್ತು ಬಾಂಬೆ ಪ್ರಾಂತ್ಯಕ್ಕೆ ಸೇರಿದ್ದ ಕೆಲವು ಜಿಲ್ಲೆಗಳನ್ನು ಕರ್ನಾಟಕಕ್ಕೆ ಸೇರಿಸಿಕೊಂಡಾಗಲೂ ಇಂಥ ಹಲವಾರು ಸಮಸ್ಯೆಗಳು ಹುಟ್ಟಿದವು. ಈ ಎಲ್ಲಾ ಸಮಸ್ಯೆಗಳನ್ನು ಪರಿಹರಿಸಲು ಸರ್ಕಾರ ಗೊಂದಲದ ಭೂಮಿಯನ್ನು ತನ್ನ

(ಮುಂದಿನ ಪುಟಕ್ಕೆ)

ಕ್ಷೀರ ಸಾಗರ

# ವಯಸ್ಕರ ಶಿಕ್ಷಣ ಸಂಸ್ಥೆಯಲ್ಲಿ ಒಕ್ಕಲಿಗರ ದಬ್ಬಾಳಿಕೆ

• ವಿದ್ಯಾವಂತ ದಲಿತ ನೌಕರರೊಳಗೆ ಭದ್ರವಾದ ಸಂಘಟನೆಯ ಕೊರತೆಯಿಂದಾಗಿ ತಮ್ಮ ಮೇಲಾಧಿಕಾರಿಗಳಿಂದ ತಾವು ಪಡುವ ನೋವು ಅವಮಾನಗಳನ್ನು ಪ್ರತಿಭಟಿಸಲು ತ್ರಾಣವಿಲ್ಲದೆ ಸೈರಿಸಿಕೊಂಡು ಒಳಗೊಳಗೆ ತಾವೇ ಹಿಂಸೆ ಪಡಬೇಕಾಗಿದೆ.

ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಂಸ್ಥೆಯಲ್ಲಿ ದುಡಿಯುತ್ತಿದ್ದಂತೆಯೇ ಆ ಸಂಸ್ಥೆಯ ಪ್ರಧಾನಕಾರ್ಯದರ್ಶಿ ಹನುಮೇಗೌಡನ ಎಲ್ಲಾ ತರಹದ ತೊಂದರೆಗಳನ್ನು ಅನುಭವಿಸಿ, ಇದ್ದಕ್ಕಿದ್ದಂತೆ ಬೀದಿಪಾಲಾಗಿರುವ ಜಯರಾಮಪ್ಪ ಮತ್ತು ಚಿಕ್ಕ ಅಂದಾನಯ್ಯನವರ ಗೋಳಿನ ಕಥೆಯು ಎಲ್ಲಾ ದಲಿತ ನೌಕರರ ಹೃದಯವನ್ನು ದಂಗು ಬಡಿಸುತ್ತದೆ.

ವಯಸ್ಕರ ಶಿಕ್ಷಣ ಸಮಿತಿಯ ಪ್ರಧಾನಕಾರ್ಯದರ್ಶಿಯಾಗಿ ಸರ್ಕಾರದಿಂದ ಬರುವ ನೆರವೆಲ್ಲವನ್ನು ಊಟಿ ಹೊಡೆಯುತ್ತಿರುವ ಈ ಹನುಮೇಗೌಡನಿಗೆ ಹೊಲೆಮಾದಿಗರಾದ ಚಿಕ್ಕಅಂದಾನಯ್ಯ ಮತ್ತು ಜಯರಾಮಪ್ಪನವರು ಮೈಸೂರಿನ ಜಿಲ್ಲಾ ಕಛೇರಿಯಲ್ಲಿ ತನ್ನೆದುರಿಗೆ ಕುಳಿತು ಕೆಲಸ ಮಾಡುತ್ತಿರುವುದು ಸೈರಿಸಲಾಗದ ವಿಷಯವಾಗಿತ್ತು. ಈ ಕಾರಣಕ್ಕಾಗಿಯೇ ದೂರ್ತ ಹನುಮೇಗೌಡನು ಈ ಇಬ್ಬರು ನೌಕರರ ಮೇಲೆ ಹೆಜ್ಜೆ ಹೆಜ್ಜೆಗೂ ಕಣ್ಣಿಟ್ಟು ಯಾವ ರೀತಿಯ ಬಡ್ತಿಯು ಸಿಗದಂತೆ

## ಭೂ ಸುಧಾರಣಾ ಚರಿತ್ರೆ

(8ನೇ ಪುಟದಿಂದ)

ವಶಕ್ಕೆ ತೆಗೆದುಕೊಂಡು ಪುನಃ ಹಂಚುವ ಪ್ರಯತ್ನ ಮಾಡಿತು. ಆದರೆ ಸರ್ಕಾರ ವಶಪಡಿಸಿಕೊಂಡ ಗೊಂದಲದ ಭೂಮಿ ಬಡ ಗೇಣಿದಾರರದ್ದೂ ಆಗಿದೆ.

ಈ ರೀತಿಯ ಏಕ ರೂಪತೆಯ ಕಾರಣದಿಂದಾಗಿ ಬಹಳಷ್ಟು ಕೇಸುಗಳಲ್ಲಿ ಬಡ ಭೂ ಮಾಲೀಕರು ಶ್ರೀಮಂತ ಗೇಣುದಾರರಿಗೆ ತಮ್ಮ ಜಮೀನನ್ನು ಒಪ್ಪಿಸಬೇಕಾಯಿತು. ತಮ್ಮ ಬಳಿ ಯಾವುದೇ ಜೀವಾದಾರವಿಲ್ಲದೆ ತುಂಡು ಭೂಮಿಯನ್ನು ಬಿಟ್ಟುಕೊಡಬೇಕಾಯಿತು. ಈ ಹಂತದಲ್ಲಿ ಸರಾಸರಿ ಶೇಕಡ ೨೦ ವಿಧವೆಯರು ಶೇಕಡ ೩೦ ಅಶಕ್ತರು ಭೂಮಿಯನ್ನು ಕಳೆದುಕೊಂಡರು. ಇಂತಹ ಸಂದರ್ಭದಲ್ಲಿ ಸಣ್ಣ ಹಿಡುವಳಿದಾರರ ಭೂಮಿ ದೊಡ್ಡ ಹಿಡುವಳಿದಾರರಿಗೆ ವರ್ಗಾಯಿಸಲ್ಪಟ್ಟಿತು.

ಬಹುದೂರಕ್ಕೆ ವರ್ಗಾಯಿಸಲು ಹೊಂಚುಹಾಕುತ್ತಿದ್ದನು.

ಬಡ್ತಿಯಲ್ಲಿ ಪ್ರತಿ ಮೊದಲನೆ ಬಡ್ತಿಯು ಹರಿಜನ ನೌಕರರಿಗೆ ಸಿಗಬೇಕೆಂದು ರೋಸ್ಟರ್ ನಿಯಮ ಹೇಳುವಂತೆ ದಲಿತ ಜಯರಾಮಪ್ಪನವರ ಬಡ್ತಿಯನ್ನು ತಡೆಹಿಡಿಯಲು ಸಾದಿಸುತ್ತಿದ್ದ ಹನುಮೇಗೌಡನ ಕೈಯಲ್ಲಿ ಆಗದೆ ; ಅನಿವಾರ್ಯವಾಗಿ ಕೌಂಸಿಲ್‌ಮೀಟಿಂಗ್‌ನಲ್ಲಿ ಚರ್ಚೆ ನಡೆದು ಜಯರಾಮಪ್ಪನವರಿಗೆ ಡೆಪ್ಯೂಟಿ ಸಿ. ಇ. ಓ. ಆಗಿ ಬಡ್ತಿ ನೀಡ ಬೇಕೆಂದು ಎಲ್ಲಾ ಸದಸ್ಯರು ಒಪ್ಪಿ ರೆಸುಲೂಸನ್ ಪಾಸುಮಾಡಿದರು. ಇದಾದನಂತರ ಒಬ್ಬ ಹರಿಜನ ರಾಜ್ಯಮಟ್ಟದ ಅಧಿಕಾರಿಯಾಗುವುದನ್ನು ಸಹಿಸದ ಹನುಮೇಗೌಡನು ಕೌನ್ಸಿಲ್ ತೀರ್ಮಾನವನ್ನು ಜಾರಿಗೆ ಕೊಡದೆ ಜಯರಾಮಪ್ಪನವರಿಗೆ ಮಾನಸಿಕ ಕಿರುಕುಳ ಕೊಟ್ಟು ಮೈಸೂರಿನಿಂದ ಧಾರವಾಡಕ್ಕೆ ೩೦-೪-೮೭ ರಂದು ತುರ್ತುವರ್ಗ ಮಾಡಿ ; ರಜದ ಮೇಲಿದ್ದ ನಾಗೇಶರಾವ್ ಎಂಬು

### ದೊಡ್ಡಣ್ಣ

ವವನನ್ನು ತನ್ನ ಆಫೀಸ್‌ಗೆ ಕರೆಸಿಕೊಂಡನು.

ಸ್ವತಃ ಹನುಮೆಗೌಡನ ಜಾತಿಯವರಾದ ಕೃಷ್ಣೇಗೌಡ, ಚನ್ನೇಗೌಡ, ಎಂಬುವರ ಮೇಲೆ ಹಲವಾರು ಅವ್ಯವಹಾರಗಳ ಆಪಾದನೆಗಳಿದ್ದು, ಪ್ರಿನ್ಸಿಪಾಲರ ಹುದ್ದೆಗೆ ಯಾವ ಅರ್ಹತೆಗಳಿಲ್ಲದಿದ್ದರೂ ತನ್ನ ಜಾತಿಯವರೆಂಬ ಒಂದೇ ಕಾರಣಕ್ಕೆ ಮೇಲ್ಕಂಡ ಗೌಡರಿಗೆ ಪ್ರಿನ್ಸಿಪಾಲರ ಹುದ್ದೆಗಳನ್ನು ನೀಡಿದನು. ಶಿಕ್ಷಣದ ಬಗ್ಗೆ ಎಲ್ಲಾ ರೀತಿಯ ಅರ್ಹತೆಗಳಿದ್ದೂ, ಸರ್ಕಾರದ ಆಜ್ಞೆ, ಕೌನ್ಸಿಲ್ ತೀರ್ಮಾನಗಳೆಲ್ಲವನ್ನೂ ಹೊಂದಿರುವ ಜಯರಾಮಪ್ಪನವರಿಗೆ ಯಾವ ಬಡ್ತಿಯೂ ದಕ್ಕದಂತೆ ಮಾಡಿದ.

ಜಯರಾಮಪ್ಪನವರಂತೆಯೇ ಹನುಮೆಗೌಡನ ಉರಿಗಣ್ಣಿಗೆ ಸಿಕ್ಕಿ ಗೋಳಾಡುತ್ತಿರುವ ದಲಿತರಲ್ಲಿ ಚಿಕ್ಕಂದಾನಯ್ಯನವರು ಮತ್ತೊಬ್ಬರು. ಅತ್ಯಂತ ಸರಳ ವ್ಯಕ್ತಿಯಾದ ಚಿಕ್ಕಂದಾನಯ್ಯನವರು ಕೇವಲ ಎರಡು ವರ್ಷಗಳ ಹಿಂದೆಯೇ ಅನಾರೋಗ್ಯದ ಕಾರಣ ಹಾಸನ ಜಿಲ್ಲಾವಯಸ್ಕರ ಶಿಕ್ಷಣ ಸಮಿತಿಯಿಂದ ಮೈಸೂರಿಗೆ ವರ್ಗವಾಗಿ ಬಂದರು. ದಲಿತ ಚಿಕ್ಕಂದಾನಯ್ಯ ಕಛೇರಿಯ ಮುಖ್ಯಸ್ಥನಾಗಿ ಕುಳಿತು ಕೆಲಸ ಮಾಡುವುದನ್ನೂ ಸಹಿಸದೆ ಒಳಗೊಳಗೆ ಕುದಿಯುತ್ತಿದ್ದ ಸದರಿ ಹನುಮೇಗೌಡನು ಚಿಕ್ಕಂದಾನಯ್ಯನವರ ಮೇಲೆ ಆಗಾಗ್ಗೆ ಕೆಂಡ ಕಾರುತ್ತಾ ಆಫೀಸ್‌ನೊಳಗೆ ಸಿಡಿದು ಬೀಳುತ್ತಿದ್ದನು. ಇದುವರೆಗೂ ಜಯರಾಮಪ್ಪನವರಿಗೆ ಬಡ್ತಿ ತಡೆಹಿಡಿದು ಕಿರುಕುಳಕೊಟ್ಟು ತೃಪ್ತಿಪಡದ ಹನುಮೇಗೌಡನು ಚಿಕ್ಕಂದಾನಯ್ಯನವರ ಬಡ್ತಿಯ ಬಗ್ಗೆ ಕಣ್ಣಿಟ್ಟು ಆ ಸ್ಥಾನಕ್ಕೆ ಪಾರ್ಥಸಾರತಿ ಎಂಬ ಮತ್ತೊಬ್ಬನನ್ನು ತಂದು ಕಿತಾಪತಿ ಮಾಡಲು ಪ್ರಾರಂಭಿಸಿದನು. ಆಶ್ಚರ್ಯಕರವೆಂದರೆ ಹನುಮೇಗೌಡನ ಹೀನ ಕೃತ್ಯಗಳಿಗೆಲ್ಲಾ ಬೇಕಾದಂತ ನರಸಿಂಹಯ್ಯ, ನಂಜುಂಡಯ್ಯ, ವೆಂಕಟರಾಮಯ್ಯ ರಾಜಪ್ಪ, ಶಣ್ಮುಕಾರಾಧ್ಯ, ರತ್ನಮ್ಮ, ಮತ್ತು ನಾಗಮಣಿದೇವಿಯರಂತಹ ಕನ್ಯೆಯರು ಸುಮಾರು ೧೦-೧೮ ವರ್ಷಗಳಿಂದ ಒಂದೇ ಸ್ಥಳದಲ್ಲಿ ಮೆರೆದಾಡುತ್ತಿದ್ದರೂ ವರ್ಗಾಯಿಸದೆ ಎರಡು ವರ್ಷಗಳ ಹಿಂದೆ ಬಂದ ದಲಿತ ಚಿಕ್ಕಂದಾನಯ್ಯನವರಿಗೆ ಹಿಂಸೆಕೊಟ್ಟು, ವಯಕ್ತಿಕ ದ್ವೇಷಕ್ಕಾಗಿ ೫೦೦ಮೈಲಿ ದೂರವಿರುವ ಅಂಕೋಲಕ್ಕೆ ವರ್ಗಾಯಿಸಿ, ತೊಂದರೆ ಪಡುತ್ತಿರುವ ಚಿಕ್ಕಂದಾನಯ್ಯನನ್ನ ಕಂಡು ಹನುಮೇಗೌಡ, ಒಳಗೊಳಗೆ ಖುಸಿಪಡುತ್ತಿರುವನು.

ಹೀಗೆ ಕೇವಲ ದಲಿತ ನೌಕರರ ಮೇಲೆಯೇ ಏಕೆ ಇಷ್ಟೊಂದು ದ್ವೇಷ ಕಾರುತ್ತಿದ್ದಾನೆ ? ಹನುಮೇಗೌಡನ ಬಗ್ಗೆ ಬೇರೆ ಏನಾದರೂ ಕಾರಣ ವಿದೆಯೇ ? ಎಂದು ಹುಡುಕುತ್ತಾ ಹೋದಾಗ ಅವನ ನಿಕಟವರ್ತಿಯೊಬ್ಬರು ಅತ್ಯಂತ ನಿಸ್ಸಂಕೋಚದಿಂದ ತಿಳಿಸಿದ್ದು ಹೀಗೆ : ಹನುಮೇಗೌಡರು ಕಾರ್ಯದರ್ಶಿಯಾಗಿ ಬಂದಾಗಿನಿಂದ ಮಾಡಿದ ಭ್ರಷ್ಟಾಚಾರದ ಪಟ್ಟಿಯೊಂದನ್ನು ಯಾರೋ ತಯಾರಿಸಿ ಗೌಪ್ಯವಾಗಿ ಸರ್ಕಾರಕ್ಕೆ ಕಳುಹಿಸಿರುವುದನ್ನು ತಿಳಿಯದ ಹನುಮೇಗೌಡರು, ಜಯರಾಮಪ್ಪ ಮತ್ತು ಚಿಕ್ಕಂದಾನಯ್ಯನವರೇ ಸರ್ಕಾರಕ್ಕೆ ತನ್ನ ಮೇಲೆ ಅನಾಮದೇಯ ಪತ್ರ ಬರೆದಿದ್ದಾರೆಂಬ ತಪ್ಪು ಕಲ್ಪನೆಯಿಂದ ಇಷ್ಟೆಲ್ಲಾ ಅದ್ವಾನ ಮಾಡುತ್ತಿದ್ದಾರೆಂದು ಹೇಳುತ್ತಾ, ನಿಟ್ಟುಉಸಿರುಬಿಟ್ಟರು. ಇದರ ಪ್ರತಿಫಲವಾಗಿ ಪ್ರಕಾಶ್ ಎಂಬ ಮತ್ತೊಬ್ಬ ದಲಿತನನ್ನು ಬಳ್ಳಾರಿಗೆ, ಕಂಬಣ್ಣನನ್ನು ನೆಗಳೂರಿಗೆ, ಪಾರ್ಥಸಾರತಿಯನ್ನು ಮಡಿಕೇರಿಯಂತೆ ವರ್ಗಾಯಿಸಿ ; ಹನುಮೇಗೌತನ ಜಾತಿಯವರಾದ ಕೆಂಪೇಗೌಡ, ವೀರಭದ್ರೇಗೌತ ಕೃಷ್ಣೇಗೌಡ, ಬೈರೇಗೌಡ, ನಾರಾಯಣಗೌಡ, ಸಣ್ಣೇಗೌಡ, ಈರೇಗೌಡ, ಕರೀಗೌಡ, ವೆಂಕಟಸುಬ್ಬೆಗೌಡ ಮುಂತಾದ ಗೌಡರಿಗೇ ಅನುಕೂಲ ಮಾಡಿಕೊಟ್ಟು ಪವಿತ್ರವಾದ ವಯಸ್ಕರ ಶಿಕ್ಷಣ ಸಂಸ್ಥೆಯನ್ನು ಒಕ್ಕಲಿಗರ ಸಂಸ್ಥೆಯನ್ನಾಗಿ ಪರಿವರ್ತಿಸುತ್ತಿದ್ದಾರೆಂದು ಅತ್ಯಂತ ಕಳಕಳಿಯಿಂದ ತಿಳಿಸಿದರು.

# ಪ್ರಾಣವನ್ನೂ ಲೆಕ್ಕಿಸದ ಜಾತ್ಯಾಂಧ ಬ್ರಾಹ್ಮಣಿಕೆ

ನನ್ನ ಬಾಲ್ಯಾವಸ್ಥೆಯಲ್ಲಿ ನಡೆದ ಒಂದು ಘಟನೆ :

ಆಗ ದಾರಿಯಲ್ಲಿ ಹೋಗುತ್ತಿರುವಾಗ ಎದುರಾದ ಅಸ್ಪೃಶ್ಯರನ್ನು ದೂರ ಸರಿಯುವಂತೆ ಮಾಡಲು 'ಹೋಯ್....ಹಾ !'' ಎಂದು ಒಂದೇ ಸಮನೆ ಕೂಗುತ್ತಾ ಬರುತ್ತಿದ್ದ ನಂಬೂದರಿಗಳಿಂದ ನನ್ನ ಪಿತ್ತ ಕೆರಳುತ್ತಿತ್ತು. ಸುಮಾರು ಒಂದು ಮೈಲಿ ದೂರದ ಹೊಲದಲ್ಲಿ ಬೆಳೆದಿದ್ದ ''ಟ್ಯಾಪಿಯೋಕಾ'' ಗಿಡಗಳನ್ನು ಕಿತ್ತು ಹಾಕಲು ಜಾತಿಯಲ್ಲಿ ಇಸ್ಹಾವನಾದ ನನ್ನ ಆಳು ಕುನ್ನಿರಾಮನ್ ಜೊತೆಯಲ್ಲಿ ನಾನು ಹೋಗುತ್ತಿದ್ದೆ. ಆಗ ನಾವು ಒಂದು ಖಾರಿಯನ್ನು ದಾಟಬೇಕಾಗಿತ್ತು. ಈಗ ಅದಕ್ಕೆ ಅಡ್ಡಲಾಗಿ 'ಮುತ್ತೂರ್‌ಫಲ' ಮರಗಳಿಂದ ಸೇತುವೆ ನಿರ್ಮಿಸಲಾಗಿದೆ. ಆಗ ಈ ಸೇತುವೆ ನಿರ್ಮಾಣವಾಗಿರಲಿಲ್ಲ. ದೋಣಿಯ ಸಹಾಯದಿಂದ ಖಾರಿಯನ್ನು ದಾಟಬೇಕಾಗಿತ್ತು. ದೋಣಿಯನ್ನು ಹೇಗೆ ನಡೆಸಬೇಕೆಂದು ತಿಳಿಯದೆ ''ಮಂ. ಬಾಸಾಮದಂ'' ನ ಹಿರಿಯ ನಂಬೂದರಿಯೊಬ್ಬ ಆ ಖಾರಿಯ ಬಳಿ ಕಾದು ನಿಂತಿದ್ದ. ಅಲ್ಲಿ ಕೇವಲ ಐದಾರು ಮಂದಿಯನ್ನು ಕರೆದೊಯ್ಯುವಷ್ಟು ಕಿರಿದಾಗಿದ್ದ ಒಂದು ದೋಣಿ ನಿಂತಿತ್ತು. ನಮ್ಮನ್ನು ನೋಡಿದ ನಂಬೂದರಿ ಮೊದಲು ದೋಣಿಗಿಳಿದು ಕೂತ. ದೋಣಿಯಲ್ಲಿನ ಹುಟ್ಟಿನ ಕಡೆಗೆ ನಡೆದು ಅದನ್ನು ನಾನು ನಡೆಸಿ ಆ ನಂಬೂದರಿಯನ್ನು ಆಚೆ ದಡದ ಮೇಲೆ ಇಳಿಸಿ ಅನಂತರ ಅಸ್ಪೃಶ್ಯಾ ಕುನ್ನಿರಾಮನ್‌ನನ್ನು ಕರೆತರುವಂತೆ ಆ ನಂಬೂದರಿ ನನಗೆ ಆಜ್ಞಾಪಿಸಿದ. ಅವನ ಆ ಗರ್ವದ ಸಲಹೆಗೆ ಯಾವುದೋ ಕೋಪವನ್ನು ವ್ಯಕ್ತ ಪಡಿಸದೆ ನಾನು ದೋಣಿಗಿಳಿದು ಕುನ್ನಿರಾಮನ್‌ನನ್ನು ದೋಣಿಗಿಳಿಯುವಂತೆ ಆಜ್ಞಾಪಿಸಿದೆ. ಅವನು ದೋಣಿಗಿಳಿಯಲು ಹಿಂದೂ ಮುಂದೂ ನೋಡಿದಾಗ ನಾ ನು ಅವನನ್ನು ಬಲವಂತವಾಗಿ ದೋಣಿಯೊಳಕ್ಕೆ ನೂಕಬೇಕಾಯ್ತು. ಕುನ್ನಿರಾಮನ್ ದೋಣಿಯ ಸ್ಪರ್ಶಿಸುವ ಕ್ಷಣ ಬಂದಾಗ ಅದರೊಳಗಿದ್ದ ನಂಬ ದರಿಯು ಖಾರಿಯು ಆಳವಾಗಿದೆ ಎಂಬುದನ ಯೋಚಿಸದೆ ಚಂಗನೆ ನೀರಿಗೆ ಹಾರಿದ! ಆದರೆ ನಂಬೂದರಿ ಬ್ರಾಹ್ಮಣನಿಗೆ ಈಜು ಬರುತ್ತಿರಲ ವಾಗಿ ಇನ್ನೇನು ಅವನು ನೀರಿನಲ್ಲಿ ಮುಳುಗುವ ನಿದ್ದನು. ಈಜುವುದರಲ್ಲಿ ಪ್ರವೀಣನಾಗಿದ್ದ ಕು ರಾಮನ್‌ಗೆ ನಂಬೂದರಿಯನ್ನು ರಕ್ಷಿಸಲು ಹೇಳಿ ಅದರಂತೆ ಕುನ್ನಿರಾಮನ್ ನಂಬೂದರಿಯನ್ನು ತ ಕೊಂಡು ನೀರಿನಿಂದ ಎತ್ತಿಕೊಂಡು ಬಂದ.

ಆಗ ನೆರೆದ ಜನ ಸಮೂಹದೆದುರಿಗೆ ಆ ನಂಬ ದರಿ ಬ್ರಾಹ್ಮಣನಿಗೆ ಒಂದು ಪ್ರಶ್ನೆ ಕೇಳಿ ''ಇಸ್ಹಾವನ ಸ್ಪರ್ಶದಿಂದ ಉಂಟಾದ ಮೈಲ ಯನ್ನು ತೊಳೆದುಕೊಳ್ಳಲು ತಾವು ಮತ್ತೆ ಸ್ನಾ ಮಾಡಬಯಸುತ್ತಿರಾ ಅ ಲ್ಲ ವೆ ?'' ಆಗ ಬ್ರಾಹ್ಮಣನ ಮುಖ ಅವಮಾನಗೊಂಡ ಕಾಣಿಸಿತು.

—ಪೆರಿಯಾ

(On Looking Back ಪುಸ್ತಕದಿಂದ)

**ಅನುಭವದ ಗಣಿಯಿಂದ**

# ಜಾತಿಯನ್ನು ಮೀರುವ ಮನುಷ್ಯತ್ವಕ್ಕೆ ಬೀತಿಯ ತಡೆ

**ರುದ್ರಪ್ಪ ಹನಗವಾಡಿ**

ನಾನು ಈಗ್ಗೆ ಒಂದು ತಿಂಗಳ ಹಿಂದೆ ನನ್ನ ಹುಟ್ಟೂರಾದ ಹನಗವಾಡಿಗೆ ಹೋಗಿದ್ದೆ. ನನ್ನ ತಂಗಿಯ ಮದುವೆಗಾಗಿ ಹಣ ಮತ್ತು ಹಲವಾರು ಸಲಕರಣೆಗಳನ್ನು ಜೋಡಿಸೋ ಬಿಸಿಯಲ್ಲಿದ್ದುದರಿಂದ ಅಂದು ನಮ್ಮ ಮನೆಯಲ್ಲಿ ಊಟವಾಗುವುದು ತಡವಾಯಿತು. ಇನ್ನೇನು ನಾನು ಊಟಕ್ಕೇಳಬೇಕು ನಮ್ಮೂರ ಲಿಂಗಾಯಿತರ ಮನುಷ್ಯನೊಬ್ಬ ಬಂದು ಕೂತು ನನ್ನನ್ನೂ, ನನ್ನ ಹೆಂಡತಿಯನ್ನೂ ಊಟಕ್ಕೆ ಬರಬೇಕೆಂದು ಒತ್ತಾಯದಿಂದ ಕರೆದ. ನಾನು 'ಈಗ ಇರಲಿ, ಇನ್ನೊಮ್ಮೆ ಬಂದಾಗ ಬರುವೆ' ಎಂದು ಹೇಳಿದರೂ ಕೇಳದೆ ಬರಲೇಬೇಕೆಂದು ಆಗ್ರಹಪಡಿಸಿದ. ಆತ ಅಷ್ಟೇನೂ ಓದಿದವನಲ್ಲದಿದ್ದರೂ ನಾಕಾರು ಕಡೆ ತಿರುಗಿ liberal ಆಗಿದ್ದ. ಇಂದಿರಾ ಗಾಂಧಿಯ ಪಕ್ಷದಲ್ಲಿದ್ದುಕೊಂಡು ಬಡವರು–ಪಡವರು ಎಂದೆಲ್ಲಾ ಮಾತಾಡುತ್ತಿದ್ದ. ಇವನ ಬಗ್ಗೆ ಸ್ವಲ್ಪ ಕುತೂಹಲವಿತ್ತು. ಸರಿ ಹೋಗೋಣ ಎಂದು ನಾವಿಬ್ಬರೂ ಹೋದೆವು.

ನಮ್ಮ ಮನೆಯಲ್ಲಿ ನಮ್ಮನ್ನು ಕರೆದ ಈತನ ಧ್ವನಿ ಅವರ ಮನೆಯ ಹತ್ತಿರ ಹೋಗುತ್ತಿದ್ದಂತೆ ಸಣ್ಣದಾಗುತ್ತಾ ಹೋಯಿತು. ನಾನು ನನ್ನ ಮಾಮೂಲು ವರಸೆಯಲ್ಲಿ ಹೋಗಿ ಅವರ ಮನೆಯ ಮಂಚದಲ್ಲಿ ಇಬ್ಬರೂ ಕೂತೆವು. ಅದೊಂದು Joint family ಆದದ್ದರಿಂದ ಅಲ್ಲೇ ಅನೇಕ ಪಿಳ್ಳೆಗಳು ಮಲಗಿದ್ದವು. ಕೆಲವು ಮುದುಕರು ಮತ್ತೊಬ್ಬ ಯಾರೋ ಕೂತಿದ್ದರು ಕೂಡ. ಇವರೆಲ್ಲರ ಎದುರಿಗೆ ನನಗೆ ಒಳಗೆ ಊಟ ಹಾಕಲು ಜಾತಿಯ ಸಮಸ್ಯೆ ಎದ್ದು ಏನು ಮಾಡುವುದೆಂದು ತೋಚದೆ ಅದು ಇದು ಮಾತು ನಡೆದಿತ್ತು. ಕಡೆಗೆ ಒಳಗೆ ಹೋಗಿದ್ದ ಈತ ಏನೋ ತೀರ್ಮಾನ ಮಾಡಿದಂತೆ 'ತಾಯಿ ಒಳಗ ಕೂರ್ತಾಳ........ ಮೇಷ್ಟ್ರೀಗೆ ಇಲ್ಲೇ ಹಾಕು'. ಎಂದು ಹೆಂಡ್ತಿಗೆ ಹೇಳ್ದ.

ಸರಿ ನಿನ್ನ ಊಟವನ್ನು ನೀನು ಮಾಡಿಕೊ ಅಂತ ಮನೆಗೆ ಬಂದೆವು. ನನ್ನ ಹೆಂಡತಿ ಬ್ರಾಹ್ಮಣಳಾಗಿ ಹುಟ್ಟಿದ್ದರಿಂದ ಅವಳು ಒಳಗೆ ಕೂರಲಿ ನಾನು ಚಲವಾದಿ ಅನ್ನೋ ಕಾರಣಕ್ಕೆ ಇ ಕೂರಿಸುವುದು ಅವನಿಗೆ ಸರಿಯಾಗಿ ಕಂಡಿತು ನಾನು ಅವನ ಮನೆಗೆ ಹೋದ 10 ನಿಮಿಷದ ವಾಪ್ಸು ಬಂದುದನ್ನ ಅವ್ವ ಕೇಳಿ ಇದೇನಪ್ಪಾ ಎಂದಳು. ನಾನು ನಡೆದದ್ದೆಲ್ಲಾ ಹೇಳಿ ಊಟ ಹಾಕಲು ಹೇಳಿದೆ.

ಈ ರೀತಿ ನಡೆದುಕೊಂಡ ಅವನ ಬಗ್ಗೆ ಕರುಣ ಇದೆ. ನನ್ನ ಮನೆಯಲ್ಲಿ ಮತ್ತು ನನ್ನೂರಿ ಮನೆಯಲ್ಲಿ ಯಾವುದೇ ಮುಲಾಜಿಲ್ಲದೆ ತಿನ್ನೋ ಅವನು, ಅವನ ಮನೆಗೆ ಹೋದಾಗ ಈ ರೀತಿ ನಡೆದ ಕೊಂಡದ್ದು ನೋಡಿದರೆ ಮೊದಲನೆಯದಾಗಿ ಅ ಮಹಾ ಪುಕ್ಕಲನಿರಬೇಕು. ಎರಡನೆಯದಾ ಮನೆಯಲ್ಲಿ ಹೆಂಡರು ಮಕ್ಕಳನ್ನು ತಾನು ನಂಬಿ ಸಮಾನತೆಯ ಬಗ್ಗೆ ಯಾವ ರೀತಿಯಲ್ಲೂ ತಿಳ ವಳಿಕೆ ನೀಡದಿರುವುದು. ಹೀಗಾಗಿ ಬಹಳ ಜ ಆರೋಗ್ಯವಂತರಂತೆ ಕಂಡರೂ ಮನೆ ಮತ್ತು ಸಂಸಾರಗಳ ಮಟ್ಟದಲ್ಲಿ ಜಾತಿವಾದಿಗಳಾಗಿ ಕಾಣ ತ್ತಾರೆ. ಇಂತಹ ಸಂದರ್ಭಗಳಲ್ಲಿ ದಲಿತರು ನೇ ವಾಗಿ ನಡೆದುಕೊಂಡರೆ ದಲಿತರಿಗೂ ಮತ್ತು ಜಾ ವಾದಿಗಳಾಗಿ ಉಳಿದಿರೋ ವ್ಯಕ್ತಿಗಳಿಗೂ ಆರೋಗ್ಯ



ಪ್ರಿಂಟರ್ಸ್ ಪ್ರಕಾಶನದ ಎರಡನೇ ಪ್ರಕಟಣೆ

ಸಿದ್ಧಲಿಂಗಯ್ಯ ಬರೆದ

## ಅವತಾರಗಳು

ಈಗ ಬಿಡುಗಡೆಯಾಗಿದೆ

ಬೆಲೆ : ರೂಪಾಯಿ ಏಳು

ದೇವರು ಮನುಷ್ಯರ ಮೈಮೇಲೆ ಬರುವುದು ಹಳ್ಳಿಗಳಲ್ಲಿ ಮೇಲಿಂದ ಮೇಲೆ ಕಾಣುವ ಘಟನೆ.

ಶ್ರೀ ಸಿದ್ಧಲಿಂಗಯ್ಯ ತಾವು ಕಂಡ ಇಂಥಾ ಘಟನೆಗಳನ್ನು ಈ ಪುಸ್ತಕದಲ್ಲಿ ಕಲೆ ಹಾಕಿದ್ದಾರೆ. ರಂಜನೀಯವಾದ ಈ ನಿರೂಪಣೆ ನಮ್ಮ ಜನರ ಜೀವನಕ್ರಮದ ಬಗ್ಗೆ ಹೊಸತಾಗಿ ಯೋಚಿಲೂ ಪ್ರೇರೇಪಿಸುತ್ತದೆ.

ಪ್ರಿಂಟರ್ಸ್ ಪ್ರಕಾಶನದ ಮೊದಲ ಪ್ರಕಟಣೆ

ಚಂದ್ರಶೇಖರ ಕಂಬಾರರ ಕಾದಂಬರಿ

## ಸಿಂಗಾರೆವ್ವ ಮತ್ತು ಅರಮನೆ

ಈಗ ಪುನರ್ಮುದ್ರಣದ ಪ್ರತಿಗಳು ಸಿಗುತ್ತವೆ.

ಬಿಡುಗಡೆಯಾದ ಹದಿನೈದೇ ದಿನಗಳಲ್ಲಿ ಮೊದಲ ಮುದ್ರಣದ ಎಲ್ಲಾ ಪ್ರತಿಗಳೂ ಖರ್ಚಾದ ಪುಸ್ತಕ ಇದು.

ಬೆಲೆ : ರೂಪಾಯಿ ಒಂಬತ್ತು


# ಪ್ರಿಂಟರ್ಸ್ ಪ್ರಕಾಶನ

16, ಮಹಾತ್ಮಾಗಾಂಧಿ ರಸ್ತೆ,
ಬೆಂಗಳೂರು-560 001

ಮಾಲೀಕರು : ದಿ ಪ್ರಿಂಟರ್ಸ್ (ಮೈಸೂರು) ಲಿಮಿಟೆಡ್.
ಬೆಂಗಳೂರು.

# ಸತ್ತ ದನ ಎತ್ತದ್ದಕ್ಕೆ ಅಣ್ಣಯ್ಯಪ್ಪನ ಕೈಕಾಲು ಮುರಿತ!

ರಕ್ತ ಚೆಲ್ಲಿಯಾದರೂ ನ್ಯಾಯಂ ಪಡೆಯುತ್ತೇವೆ ; ಪ್ರಾಣ ತೆತ್ತಿಯಾದರೂ ನ್ಯಾಯಗಳಿಸುತ್ತೇವೆ ; ಎಂದು ಕೆಚ್ಚಿನಿಂದ ಕೂಗುತ್ತಿದ್ದ ಘೋಷಣೆಗಳು ಮಾರಗೊಂಡನ ಹಳ್ಳಿಯ ಭೂಮಾಲಿಕರ ಎದೆಗಳಿಗೆ ಒದ್ದಂಗಿತ್ತು. ಮಾರಗೊಂಡನ ಹಳ್ಳಿಯ ಭೂಮಾಲೀಕರಾದ ವಾಸುದೇವರೆಡ್ಡಿ ಮತ್ತು ಅವರ ಗೂಂಡಾಗಳು ದಲಿತ ಅಣ್ಣಯ್ಯಪ್ಪನ ಮೇಲೆ ದೌರ್ಜನ್ಯ ನಡೆಸಿದರು. ಪರಿಣಾಮ ಅಣ್ಣಯ್ಯಪ್ಪನ ಪಕ್ಕೆಲಬುಗಳು ಮುರಿದು ಬೆಂಗಳೂರು ಸ್ಯಾನಿಟೋರಿಯಂ ಆಸ್ಪತ್ರೆಯಲ್ಲಿ ಸಾವು ನೋವುಗಳ ಮಧ್ಯೆ ನರಳುತ್ತಿದ್ದಾರೆ.

ಈ ದೌರ್ಜನ್ಯಕ್ಕೆ ಕಾರಣ, ಮಾರಗೊಂಡನ ಹಳ್ಳಿಯಲ್ಲಿ ದನ ಸತ್ತಿತ್ತು. ಅದನ್ನು ಎತ್ತಿ ಹಾಕಲು ದಲಿತರ ಮೇಲೆ ಭೂಮಾಲಿಕರ ಒತ್ತಾಯ ದಲಿತ ಅಣ್ಣಯ್ಯಪ್ಪ, ತಮ್ಮ ಜನಗಳ ಸ್ವಾಭಿಮಾನ ಕಾಪಾಡಲು ಸತ್ತ ದನ ಎತ್ತ ಬಾರದೆಂದು ಪ್ರತಿಭಟಿಸಿದರು. ಇದರ ಬಗ್ಗೆ ಸೇಡು ತೀರಿಸಿಕೊಳ್ಳಲು ನಿನ್ನನ್ನು ಇನ್ನೊಂದು ವಾರದಲ್ಲಿ ಮುಗಿಸಿ ಬಿಡುತ್ತೇವೆಂದು ಭೂಮಾಲೀಕರು ಅಣ್ಣಯ್ಯಪ್ಪನಿಗೆ ಬೆದರಿಕೆ ಹಾಕಿದರು. ಮುಂದಿನ ವಾರ ಅಣ್ಣಯ್ಯಪ್ಪನ ತಿಥಿ ಎಂದು ಆತನ ಬಂಧುಗಳಿಗೆಲ್ಲ ಭೂ ಮಾಲೀಕರೇ ಪ್ರಚಾರ ಮಾಡಿದರು.

ಭೂಮಾಲಿಕರ ಬೆದರಿಕೆ ಬಗ್ಗೆ ಪೋಲೀಸರಿಗೆ ಅಣ್ಣಯ್ಯಪ್ಪ ದೂರು ನೀಡಿ ರಕ್ಷಣೆ ಕೋರಿದ್ದರು. ಆದರೆ ಪೋಲೀಸರು ದೂರನ್ನು ಗಮನಕ್ಕೆ ತೆಗೆದುಕೊಳ್ಳಲಿಲ್ಲ. ೩-೭-೮೨ ರಂದು ಸಂಜೆ ಅಣ್ಣಯ್ಯಪ್ಪ ಒಬ್ಬಂಟಿಗನಾಗಿ ಬರುತ್ತಿದ್ದಾಗ ಭೂಮಾಲೀಕರು ಕೊಲೆ ಮಾಡಲು ಸಂಚುಹೂಡಿ, ಒಂದು ಬೆಟ್ಟದ ಪಕ್ಕದಲ್ಲಿ ಕಾದಿದ್ದರು. ದೊಣ್ಣೆ ಮುಂತಾದ ಆಯುಧಗಳಿಂದ ಭೂಮಾಲಿಕರಾದ ವಾಸುದೇವರೆಡ್ಡಿ, ಕೊದಂಡರಾಮರೆಡ್ಡಿ. ಮತ್ತು ಅವನ ಗೂಂಡಗಳು ಅಣ್ಣಯ್ಯಪ್ಪನನ್ನು ಪ್ರಜ್ಞಹೀನನಾಗುವವರೆಗೂ ಹೊಡೆದರು. ಕೊನೆಗೆ ಅಣ್ಣಯ್ಯಪ್ಪ ಸತ್ತನೆಂದು ಅಲ್ಲಿಂದ ಕಾಲುಕಿತ್ತರು.

ಪೋಲೀಸರು ಭೂ ಮಾಲೀಕರನ್ನು ಬಂಧಿಸಲಿಲ್ಲ. ಪೋಲೀಸರು. ಬಂಧಿಸುವ ನಾಟಕ ಮಾಡುತ್ತಿರುವಾಗಲೇ ಭೂ ಮಾಲಿಕರು ನಿರೀಕ್ಷಣಾ ಜಾಮೀನಿನ ಮೇಲೆ ಹೊರ ಬಂದರು.

ಈ ದಬ್ಬಾಳಿಕೆ ಮತ್ತು ಪೋಲಿಸರ ನಿಷ್ಕ್ರಿಯತೆ

ಡಿ. ಗೋಪಾಲಕೃಷ್ಣ

ಯನ್ನು ಪ್ರತಿಭಟಿಸಿ ಬೆಂಗಳೂರು ಜಿಲ್ಲಾ ದ. ಸಂ.ಸ. ಮಾರಗೊಂಡನ ಹಳ್ಳಿಯಿಂದ ಹೊಸಕೋಟೆ ವರೆಗೂ ತಾ : ೨೩-೭-೮೨ ರಂದು ಕಾಲು ನಡಿಗೆಯ ಜಾಥಾ ಏರ್ಪಡಿಸಿತ್ತು.

ಬೆಂಗಳೂರು ಜಿಲ್ಲಾ ದಲಿತ ಸಂಘರ್ಷ ಸಮಿತಿ ಸಂಚಾಲಕರಾದ ಶ್ರೀ ವೆಂಕಟಸ್ವಾಮಿ ಅವರ ಪತ್ನಿ ಶ್ರೀಮತಿ ರತ್ನ ಅವರು ಜಾಥಾವನ್ನು ಉದ್ಘಾಟಿಸಿದರು.

"ಈ ೨೦ ವರ್ಷಗಳಲ್ಲಿ ಇಂತಹ ಮೆರವಣಿಗೆ ನಾನು ಕಂಡಿರಲಿಲ್ಲ ಸ್ವಾಮಿ" ಎಂದು ೪೫ ವರ್ಷದ ನರಸಿಂಹಯ್ಯ ತಿಳಿಸಿ "ನಡಿರೀ ಸಾ ಪ್ರಾಣ ಹೋದರೂ ಸರಿನಾನು ಬರ್ತೀನಿ" ಎಂದುಹೊರಟ. ಮಾರಗೊಂಡನ ಹಳ್ಳಿಯಿಂದ ಕಿತಕನೂರಿಗೆ ಹೊರಟಾಗ ಜನಗಳ ಜಾತ್ರೆ. ಅಲ್ಲಿನ ದಲಿತ ಯುವಕರು, ಹೆಂಗಸರು ಮಕ್ಕಳು ಜಾಥಾ ಜೊತೆಯಲ್ಲಿ ಸೇರಿದರು.

ಕಾಲು ದಾರಿ ಉದ್ದಕ್ಕೂ "ಪಿಚ್ಚಳ್ಳಿ" ಯವರ ಕ್ರಾಂತಿಗೀತೆಗಳು ಜನರನ್ನು ತಟ್ಟಿ ಎಬ್ಬರಿಸುತ್ತಿದ್ದವು.

ಹೊಸಕೋಟೆ ತಾಲ್ಲೂಕು ಆಫೀಸ್ ಮೈದಾನದಲ್ಲಿ ಬಹಿರಂಗೆ ಸಭೆ. ದೊಡ್ಡ ಎಲ್ಲಪ್ಪ ಜಾಥಾದ ಉದ್ದೇಶವನ್ನು ವಿವರಿಸಿದರು. ಬೆಂಗಳೂರು ಜಿಲ್ಲೆ ಸಂಚಾಲಕ ಶ್ರೀ ವೆಂಕಟಸ್ವಾಮಿ ಸ್ವಾಗತ ಭಾಷಣ ಮಾಡಿದರು. ರಾಜ್ಯ ಸಂಚಾಲಕ ಶ್ರೀ ಎಂ. ಡಿ. ಗಂಗಯ್ಯ ಸಭೆಯನ್ನು ಉದ್ದೇಶಿಸಿ ಮಾತನಾಡುತ್ತ ಹೊಸಕೋಟೆ ದಲಿತರ ಮೇಲಿನ ದೌರ್ಜನ್ಯಗಳಿಗೆ ತವರೂರಾಗಿದೆ, ಎಂದು ತಿಳಿಸಿ ಸಂಬಂಧಪಟ್ಟ ಅಧಿಕಾರಿಗಳು ಈ ದೌರ್ಜನ್ಯಗಳನ್ನು ತಡೆಗಟ್ಟದೆ ಹೋದರೆ ಶಾಂತ ರೀತಿಯಿಂದ ತೀವ್ರ ಹೋರಾಟ ನಡೆಸಬೇಕಾಗುತ್ತದೆ ಎಂದರು. ರಾಜ್ಯ ಸಂಚಾಲಕರಾದ ಶ್ರೀ ಬಿ. ಕೃಷ್ಣಪ್ಪನವರು ಮಾತನಾಡುತ್ತ ಕಾನೂನು ಪಾಲಕರು ಶಾಸನ ಬದ್ಧವಾಗಿ ಜನರ ದೂರುಗಳಿಗೆ ಸರಿಯಾಗಿ ಗಮನ ಹರಿಸಿ ನಿಷ್ಪಕ್ಷಪಾತವಾಗಿ ದೌರ್ಜನ್ಯ ನಡೆಸುವವರ ವಿರುದ್ಧ ಕ್ರಮ ಜರುಗಿಸಿ, ನ್ಯಾಯ ಕಾಪಾಡ ಬೇಕು. ಎಂದು ತಿಳಿಸಿದರು.

ದಲಿತ ಕಲಾಮಂಡಲಿಯ ಶ್ರೀ ನಾಗರಾಜ್ ಮತ್ತು ಶ್ರೀ ಶಂಕರ್‌ರವರು ನಿರ್ದೇಶಿಸಿದ "ಪತ್ರೆ ಸಂಗಪ್ಪನ ಕಗ್ಗೊಲೆ" ಎಂಬ ನಾಟಕ ದಲಿತರಲ್ಲಿ ಸ್ಫೂರ್ತಿ ಮೂಡಿಸಿತು. *

# ಕಣ್ಮರೆಯಾದ ಚೆರಬಂಡರಾಜು

ಮೊದಲನೆ ಪುಟದಿಂದ

ಉಪಾಧ್ಯಾಯರಾಗಿ ಸಾಲದ ಸಂಬಳದಲ್ಲಿ ಕಾಲ ಕಳೆಯುತ್ತಿದ್ದ ಚೆರಬಂಡರಾಜುವಿಗೆ ಸರ್ಕಾರ ಕೊಡದ ತೊಂದರೆ ಇಲ್ಲ. ಕೊನೆಗೆ ಕೆಲಸದಿಂದ ವಜ ಮಾಡಿದರೂ ಈ ಕವಿ ಸರ್ಕಾರದ ಗುಲಾಮನಾಗಲಿಲ್ಲ. ಅನೇಕ ಸುಳ್ಳು ಮೊಕದ್ದಮೆಗಳಲ್ಲಿ ಚೆರಬಂಡರಾಜು ಅವರನ್ನು ಸಿಕ್ಕಿಸಿ ಸೆರೆಮನೆಗೆ ತಳ್ಳಲಾಯಿತು. ಆದರೂ ಈ ಕವಿ ಮೂಕರಾಗಲಿಲ್ಲ.

ದಿಗಂಬರ ಕವಿಗಳ ವಚನ ಪದ್ಯಗಳು ಜನರನ್ನು ಮುಟ್ಟುವುದಿಲ್ಲ ಎಂಬ ಆಪಾದನೆ ಇತ್ತು. ಕ್ರಾಂತಿಕಾರಿ ಕವಿಯಾದ ಮೇಲೆ ಚೆರಬಂಡರಾಜು ತಮ್ಮ ಮಾರ್ಗವನ್ನು ಬದಲಾಯಿಸಿಕೊಂಡರು. ಮಾಧ್ಯಮವನ್ನು ಬದಲಾಯಿಸಿಕೊಂಡರು. ಜನ ಮನದಲ್ಲಿ ಕಾಡ್ಗಿಚ್ಚಿನಂತೆ ಹರಡಲು, ಹಾಡೇ ಸುಗಮವೆಂದು ಅರಿತರು. 'ಬೆಟ್ಟಗಳಾ ಒಡೆದವು' ಎಂದು ಕೂಗಿ ಹಾಡುವ ಕೂಲಿ ಜನರ ನೋವು ನಲಿವುಗಳನ್ನು ಹಾಡುಗಳಲ್ಲಿ ಪ್ರತಿಬಿಂಬಿಸಿದರು. 'ಕ್ರಾಂತಿಯ ಕುಲುಮೆ ಹತ್ತಿಕೊಂಡಿದೆ. ಕೆಂಡ ಆರಿಸದಿರು ನನ್ನಣ್ಣ' ಎಂದು ಬೇಡಿಕೊಂಡರು.

'ಕೆಂಪು', 'ಕ್ರಾಂತಿಯುದ್ಧ', 'ಗೌರಮ್ಮನ ಕನಸುಗಳು', 'ಜನ್ಮ ಹಕ್ಕು', ಮುಂತಾದ ಕವನ ಸಂಕಲುಗಳನ್ನು, 'ನಮ್ಮ ಹಳ್ಳಿ' ಎಂಬ ಕಾದಂಬರಿಯನ್ನು ಪ್ರಕಟಿಸಿದರು.

"ತೊಟ್ಟು ತೊಟ್ಟಾಗೆ ತನ್ನ ನೆತ್ತರನ್ನು ಬಿತ್ತನೆಯಂತೆ ಕ್ರಾಂತಿಗಾಗಿ ಈ ನೆಲದಲ್ಲಿ ಚೆಲ್ಲಿದ" ಚೆರಬಂಡರಾಜು ಮೆದುಳಿನ ಕ್ಯಾನ್ಸರಿಗೆ ಬಲಿಯಾಗಿ ೩೮ ವರ್ಷಗಳ ತರುಣ ವಯಸ್ಸಿನಲ್ಲೇ ಅಸುನೀಗಿದರು. ಅಂಕುಶಾಪುರವೆಂಬ ಹಳ್ಳಿಯಲ್ಲಿ ಹುಟ್ಟಿದ ಚೆರಬಂಡರಾಜು ಕೊನೆಯುವರೆಗೂ ಸರ್ಕಾರಕ್ಕೆ ಅಂಕುಶವಾಗಿಯೇ ಇದ್ದರು. ತಮ್ಮ ಸಾಹಿತ್ಯ ಜೀವನದಲ್ಲಿ ಎಂದೂ ಬಿರುದುಗಳಿಗೆ, ಬಹುಮಾನಗಳಿಗೆ, ಪದವಿಗಳಿಗೆ ಬರವಣಿಗೆಯನ್ನು ಒತ್ತೆ ಇಟ್ಟವರಲ್ಲ ಚೆರಬಂಡರಾಜು. ಸಾಮಾಜಿಕ ಚೈತನ್ಯವೇ ಧ್ಯೇಯವೆಂದು ನಂಬಿದ್ದ ನಿಷ್ಠಾವಂತ ಲೇಖಕ ಚೆರಬಂಡರಾಜು.

—ಆರ್. ವಿ. ಎಸ್. ಸುಂದರಂ

ಈ ಪತ್ರಿಕೆಯು ರಾಮದೇವ ರಾಕೆ ಅವರ ಸಂಪಾದಕತ್ವವಲ್ಲಿ, ವಿನಯ ಪ್ರಿಂಟರಿ 2514–ಎ ಕೆ. ಜಿ. ಕೊಪ್ಪಲು, ಮೈಸೂರು–14 ಇಲ್ಲಿ ಮುದ್ರಿಸಲ್ಪಟ್ಟಿತು. ಎಚ್. ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು.